ಬೆನ್ನಿನಂತೆ ಬೆನ್ನುಳ್ಳ ಕುದುರೆ ಮತ್ತು ನಪುಂಸಕವಾದ ಕುದುರೆಗಳು. ಈ ರೀತಿಯಾದ ಮೇಲೆ ಹೇಳಿದ ಲಕ್ಷಣಗಳುಳ್ಳ ಕುದುರೆಗಳು ತನ್ನ ಬೆನ್ನ ಮೇಲೆ ಕುಳಿತವರನ್ನು ನಾಶಮಾಡುತ್ತವೆ.

ಶವದಂತಿರುವ ಯಾವ ಕುದುರೆ ಇದೆಯೋ, ಯಾವ ಕುದುರೆಯಿಂದ ಸುಟ್ಟ ಚರ್ಮದ ವಾಸನೆಯಂತಹ ಗಂಧ ಬರುತ್ತದೋ ಹಾಗೂ ಎರಡು ಅಥವಾ ಅನೇಕ ಮರಿಗಳನ್ನು ಹಾಕಿದಂತಹ ಕುದುರೆಗಳು ಮಹಾದೋಷ-ವುಳ್ಳದೆಂದು ಹೇಳಲ್ಪಟ್ಟಿದೆ.

ಕೊಂಬುಳ್ಳ, ಮೂರು ಕಿವಿಯುಳ್ಳ, ಎರಡು ಗೊರಸುಳ್ಳ, ಎರಡು ಸ್ತನವುಳ್ಳ ಮತ್ತು ಉದ್ದವಾದಂತಹ ಕುದುರೆ, ವಿಸ್ತಾರವಾದ ಗೊರಸುಳ್ಳ ಕುದುರೆ ಹಾಗೂ ಕಪ್ಪಾದ ಕುದುರೆಗಳು ಅತ್ಯಂತ ಮಹತ್ತರವಾದ ದೋಷದಿಂದ ಕೂಡಿ ರಾಜ ಹಾಗೂ ರಾಷ್ಟ್ರವನ್ನು ನಾಶ ಮಾಡುತ್ತವೆ.

ಈ ಎಲ್ಲಾ ಮಹಾದೋಷ ಹಾಗೂ ಅತ್ಯಂತ ದೋಷತಮವಾದ ಕುದುರೆಗಳ ಲಕ್ಷಣಗಳನ್ನು ಹೇಳಲಾಯಿತು. ಈಗ ಅವುಗಳ ಫಲವು ಹೇಳಲ್ಪಡುವುದು.

ಕಪ್ಪಾದ ಹಲ್ಲುಗಳುಳ್ಳ ಕುದುರೆಯು ಒಡೆಯನ ಸರ್ವನಾಶವನ್ನುಂಟು ಮಾಡುತ್ತದೆ ಎಂದು ಹೇಳಲ್ಪಟ್ಟಿದೆ, ಬೆಸಸಂಖ್ಯೆಯಲ್ಲಿ ಹಲ್ಲುಗಳಿದ್ದರೆ ಮಕ್ಕಳ ನಾಶವನ್ನೂ, ಮುತ್ತಿನಂತೆ ಹಲ್ಲುಗಳಿದ್ದರೆ ಹಸಿವು ಬಾಯಾರಿಕೆಯನ್ನು ಉಂಟುಮಾಡುತ್ತದೆ. ಎರಡು ತುಟಿಗಳಲ್ಲಿ ಒಂದು ಅಧಿಕವಾಗಿದ್ದರೆ, ತುಟಿಯ ಮೇಲೊಂದು ತುಟಿಯಿದ್ದರೆ ಅದನ್ನು ಕರಾಲಿ (ಭಯಂಕರ) ಎಂದು ತಿಳಿಯಬೇಕು. ಮೇಲ್ಭಾಗದ ಹಲ್ಲಿನ ತುಟಿಯ ಮೇಲೊಂದು ತುಟಿಯಿದ್ದರೆ ಅಂತಹ ಕುದುರೆಯ ಒಡೆಯನು ಜೀವಿಸುವುದಿಲ್ಲ (ಅಂದರೆ ಸಾವು ಬರುತ್ತದೆ). ಕೆಳಭಾಗದ ಹಲ್ಲಿನ ತುಟಿಯ ಕೆಳಗೊಂದು ತುಟಿಯಿದ್ದರೆ, ಆ ಭಯಂಕರವಾದ ತುಟಿಯುಳ್ಳ ಕುದುರೆಯ

ಒಡೆಯನಿಗೆ ಭಯ ಮತ್ತು ಹಸಿವುಂಟಾಗುತ್ತದೆ. ಕಡಿಮೆ ಹಾಗೂ ಸಮವಲ್ಲದ ಅತಿಮೊನಚಾದ ಹಲ್ಲುಗಳುಳ್ಳ ನೀಚ ಕುದುರೆಯು ಉತ್ತಮ ಕುಲದಲ್ಲಿ ಹುಟ್ಟಿದ ಸ್ವಾಮಿಯನ್ನು ಅತ್ಯಂತ ಶೀಘ್ರವಾಗಿ ನಾಶಮಾಡುತ್ತದೆ.

ಕಡಿಮೆ ಹಲ್ಲುಗಳುಳ್ಳ ಕುದುರೆಯು ಮಿತ್ರನ ನಾಶವನ್ನು, ಪತ್ನಿಗೆ ಅಪವಾದವನ್ನು ತರುತ್ತದೆ ಎಂದು ಹೇಳಲಾಗಿದೆ. ಅಧಿಕ ಹಲ್ಲುಳ್ಳ ಹಾಗೂ ಎತ್ತಿನ ರೀತಿ ಹಲ್ಲುಳ್ಳ ಕುದುರೆಯು ಪ್ರಜೆಗಳನ್ನು ನಾಶ ಮಾಡುತ್ತದೆ. ಅಂತಹ ಕುದುರೆಯನ್ನು ತ್ಯಜಿಸಬೇಕು. ಕೋತಿಯ ಹಲ್ಲಿನಂತೆ ಹಲ್ಲುಳ್ಳ ಕುದುರೆ, ಅಥವಾ ಮುರಿದ ಹಲ್ಲುಳ್ಳ ಕುದುರೆ, ಅಥವಾ ಬಿದ್ದುಹೋದ ಹಲ್ಲುಳ್ಳ ಕುದುರೆ, ಇಂತಹ ಕುದುರೆ ಉಳ್ಳಂತಹವರಿಗೆ ಒಂದು ದಿನದಿಂದ ನಾಲ್ಕು ದಿನಗಳಲ್ಲಿ ಭಯವುಂಟಾಗುತ್ತದೆ ಎಂದು ತಿಳಿಯಬೇಕು.

ದೇವನಾಗರಿ ಲಿಪಿಯ ಏ (ए) ಕಾರಕ್ಕೆ ಹೋಲುವಂತಹ ಹಲ್ಲುಳ್ಳ ಕುದುರೆಯು ಒಡೆಯನ ಸಂಪತ್ತನ್ನು ನಾಶಮಾಡುತ್ತದೆ. ಆವರ್ತಾಧ್ಯಾಯದಲ್ಲಿ ಸುಳಿಗಳ ಬಗ್ಗೆ ಯಾವ ಫಲವನ್ನು ಹೇಳಲಾಗಿದೆಯೋ ಅದನ್ನು ಇಲ್ಲೂ ಅನ್ವಯಿಸಿಕೊಳ್ಳಬೇಕು. ಕುದುರೆಯ ಹಲ್ಲುಗಳು ಮುರಿದಿದ್ದರೆ ಅದು ಒಳ್ಳೆಯ ಫಲಗಳನ್ನು ಕೊಡುವುದಿಲ್ಲ. ಹೀಗೆ ಕುದುರೆಗಳು ಅನೇಕ ಲಕ್ಷಣಗಳಿಂದ ಕೂಡಿದ್ದರೂ ಅವುಗಳ ಲಕ್ಷಣವನ್ನಾಧರಿಸಿ ಫಲವನ್ನು ಬುದ್ಧಿವಂತರಾದವರು ತಿಳಿಯಬೇಕು.

ಒಂದು ವೇಳೆ ಐದು ಅಂಡಕೋಶಗಳಿದ್ದರೆ ಅವು ಸ್ಪಷ್ಟವಾಗಿ ಗೋಚರಿಸದಿದ್ದರೆ ಹಾಗೂ ಯಾವ ಕುದುರೆಯು ಹೆಣ್ಣು ಕುದುರೆಯ ಸಂಪರ್ಕವನ್ನು ಮಾಡುವುದಿಲ್ಲವೋ ಅಂತಹ ಕುದುರೆಯು ನಪುಂಸಕವೆಂದು ತಿಳಿಯಬೇಕು ಜೊತೆಗೆ ಅದು ಕುಲ ನಾಶಕವೆಂದು ಅರಿಯಬೇಕು. ಯಾವ

ಕುದುರೆಗಳಿಗೆ ಐದನೆಯ ವರ್ಷ ತುಂಬಿದರೂ ಸಹ ಅದರ ವೃಷಣವು ಸರಿಯಾಗಿ ಕಾಣುವುದಿಲ್ಲವೋ (ಅಂದರೆ ಸರಿಯಾಗಿ ಬೆಳೆಯದಿದ್ದರೆ) ಅಂತಹ ಕುದುರೆ ಯುದ್ಧ ಭೂಮಿಯಲ್ಲಿ ಶುಭಪ್ರದವಲ್ಲ, ಆದುದರಿಂದ ಅಂತಹ ಕುದುರೆ ಸವಾರಿಗೆ ಯೋಗ್ಯವಲ್ಲ. ಕಠಿಣವಾದ ವೃಷಣವುಳ್ಳ ಕುದುರೆಯು ಮಕ್ಕಳ ನಾಶವನ್ನೂ, ಹಾಗೂ ಅಂಡಕೋಶದ ಮೇಲೆ ಕೂದಲುಗಳಿದ್ದರೆ ಹಾಗೂ ಬೆಳಗಿನ ಜಾವದಲ್ಲಿ ಹುಟ್ಟಿದ್ದರೆ ಅಂತಹ ಕುದುರೆಗಳುಳ್ಳ ಒಡೆಯನ ಸಕಲ ಸಂಪತ್ತು ನಾಶವಾಗುವುದು. ಸಮವಾಗಿಲ್ಲದ (ವಿಕಾರವಾದ) ಚಿಕ್ಕದಾಗಿ ಕೃಶವಾಗಿ ಹುಟ್ಟಿದಂತಹ ಹಲ್ಲುಗಳು ಬೇರೆಬೇರೆ ಬಣ್ಣಗಳಿಂದ ಕೂಡಿದವುಗಳಾಗಿದ್ದರೆ ಮತ್ತು ದಂತಸಹಿತವಾಗಿ ಹುಟ್ಟಿದ್ದರೆ, ಅಂತಹ ಹಲ್ಲುಗಳುಳ್ಳ ಕುದುರೆಗಳು ಅಮಂಗಳಕರವಾದವುಗಳು. ಬೆಳಗಿನಜಾವದಲ್ಲಿ ಹುಟ್ಟಿದ ಕುದುರೆಯು ಸತ್ವಹೀನವಾಗಿಯೂ, ಸ್ಥಿರತೆ ಮತ್ತು ಧೈರ್ಯಗಳಿಲ್ಲದ್ದಾಗಿರುತ್ತವೆ. ಇವು ಬೆಳಗಿನಜಾವದಲ್ಲಿ ಹುಟ್ಟಿದಂತಹ ಕುದುರೆಯ ಲಕ್ಷಣವಾಗಿರುತ್ತವೆ. ಸಾಯಂಕಾಲದಲ್ಲಿ ಹುಟ್ಟಿದ ಕುದುರೆಯು, ಕತ್ತೆಯ ರೀತಿಯೂ ಅಲ್ಲ (ಮಂದ ಸ್ವಭಾವದ್ದೂ ಅಲ್ಲ, ಚುರುಕಿನ ಸ್ವಭಾವವುಳ್ಳದ್ದೂ ಅಲ್ಲ) ಬದಲಾಗಿ ಸಾಮರ್ಥ್ಯವನ್ನು ಕಳೆದುಕೊಂಡು ಅಲ್ಪಾಯು ಹಾಗೂ ಕಳೆಹೀನವಾಗಿರುತ್ತದೆ. ಆದುದರಿಂದ ಎಲ್ಲಾ ಕಾಲದಲ್ಲಿಯೂ ರಾತ್ರಿಸಮಯದಲ್ಲಿ ಹುಟ್ಟಿದ ಕುದುರೆಯು ಪ್ರಶಸ್ತವಾದುದು. ಹೆಚ್ಚಿನ ಅಂಗವಾಗಲೀ ಅಥವಾ ಕಡಿಮೆ ಅಂಗವಾಗಲೀ ಇದ್ದಂತಹ ಕುದುರೆಯನ್ನು ಅಧಮ ಕುದುರೆಯೆಂದು ಪರಿಗಣಿಸಿ ಅದು ಮಂಗಳಕರವಲ್ಲವೆಂದು ತಿಳಿಯಬೇಕು. ಒಂದು ಅಂಡಕೋಶವುಳ್ಳ ಮತ್ತು ಮೂರು ಅಂಡಕೋಶವುಳ್ಳ ಕುದುರೆಗಳು ಮಕ್ಕಳನ್ನು, ಒಡೆಯನನ್ನು ನಾಶಮಾಡುತ್ತವೆ. ಉದ್ದವಾದ ಅಂಡಕೋಶವುಳ್ಳ, ಕೋತಿಯ ಅಂಡಕೋಶದ ರೀತಿಯಲ್ಲಿ ಅಂಡಕೋಶವುಳ್ಳ ಕುದುರೆ, ಕೂದಲುಗಳಿಂದ ಕೂಡಿದ ಅಂಡಕೋಶವುಳ್ಳ

ಕುದುರೆಗಳು ಚಿತ್ರವಿಚಿತ್ರವಾದ ಫಲಗಳನ್ನು ಕೊಡುತ್ತದೆ ಹಾಗೂ ಒಡೆಯನನ್ನು ಮತ್ತು ಅವನ ಸಂಪೂರ್ಣ ಕುಲವನ್ನು ನಾಶಮಾಡುತ್ತದೆ.

ಮುಂಗೂಸಿ ಹಾಗೂ ಎತ್ತಿನ ಕಣ್ಣಿನಂತೆ ಕಣ್ಣುಳ್ಳ ಕುದುರೆ, ಹದ್ದು, ಗೂಬೆ, ಇಲಿ ಹಾಗೂ ಕಾಗೆಯ ಕಣ್ಣುಗಳಂತೆ ಕಣ್ಣುಳ್ಳ ಕುದುರೆಗಳು, ಮೇಲೆ ಹೇಳಿದ ಎಲ್ಲಾ ಅಶ್ವಗಳು ಪಾಪಕರಗಳು ಹಾಗೂ ಅಮಂಗಳಕರವಾದವುಗಳು. ಒಡೆಯನ ಕುಲನಾಶಕಾರಿಯಾದವುಗಳು ಹಾಗೂ ಯುದ್ಧದಲ್ಲಿ ನಶಿಸುತ್ತಾ ಹೋಗುತ್ತವೆ. ಕಂದುಬಣ್ಣದ ಒಂದು ಕಣ್ಣುಳ್ಳ ಕುದುರೆಯು ಯುದ್ಧದಲ್ಲಿ ಒಡೆಯನಿಗೆ ಸಾವನ್ನು ತರುತ್ತದೆ. ಆದುದರಿಂದ ಯುದ್ಧಭೂಮಿಯಲ್ಲಿ ಹಾಗೂ ಪಟ್ಟಣಪ್ರದೇಶದಲ್ಲಿ ಅಂತಹ ಕುದುರೆಗಳ ಪ್ರವೇಶವನ್ನು ನಿಷೇಧಿಸಬೇಕು. ಯಾವ ಕುದುರೆಯು ಬೇರೆಬೇರೆ ಕುದುರೆಗಳ ಜೊತೆಗೆ ಪೈಪೋಟಿ ಮಾಡುತ್ತದೆಯೋ ಅಂತಹ ಕುದುರೆಯನ್ನು ಮೂಢ ಎಂದು ಕರೆಯುತ್ತಾರೆ. ಕಟ್ಟುಹಾಕುವಿಕೆ ಹಾಗೂ ಹೊಡೆತಗಳನ್ನು ಪರಿಗಣಿಸದ ಕುದುರೆಗಳನ್ನು ಜಡ ಕುದುರೆ ಎಂದು ತಿಳಿಯಬೇಕು. ಅಂತಹ ಕುದುರೆಯನ್ನು ದೂರದಿಂದಲೇ ತ್ಯಜಿಸಬೇಕು.

ಬೈತಲೆಯ ಮಧ್ಯಭಾಗದಲ್ಲಿ ಕೂದಲುಳ್ಳ, ಜಟೆಯಂತಿರುವ ಕೂದಲುಳ್ಳ, ಸೊದೆಹುಲ್ಲಿನಂತಿರುವ ಕೂದಲುಳ್ಳ, ಬೇರೆ ಬೇರೆ ಬಣ್ಣದ ಕೂದಲುಳ್ಳ ಕುದುರೆಗಳನ್ನು ತ್ಯಜಿಸಬೇಕು. ಅಂತಹ ಕುದುರೆಗಳು ಒಡೆಯನಿಗೆ ಎಂದಿಗೂ ಸಂತೋಷವನ್ನು ನೀಡುವುದಿಲ್ಲ.

ಹುಲಿಯಂತಿರುವ ಕುದುರೆ, ಬೇರೆ ಬೇರೆ ಬಣ್ಣಗಳ ಸಮೂಹದಿಂದ ಹೊಳೆಯುತ್ತಿರುವ ಕೂದಲುಳ್ಳ ಕುದುರೆಯು ತನ್ನ ಒಡೆಯನನ್ನು ಯುದ್ಧದಲ್ಲಿ ಶೀಘ್ರವಾಗಿ ಕೊಲ್ಲುತ್ತದೆ ಹಾಗೂ ಅಂತಹ ಕುದುರೆಯಿಂದ ಕೆಲಸ ಕಾರ್ಯಗಳು

ಸಿದ್ಧಿಸುವುದಿಲ್ಲ. ರಾಷ್ಟ್ರದಲ್ಲಿ, ನಗರದಲ್ಲಿ ವಾಸಿಸುವಂತಹವರನ್ನು ಹಾಗೂ ರಾಜನನ್ನು ಬೇಗನೆ ನಾಶಮಾಡುತ್ತದೆ.

ಅಧಮವಾದಂತಹ ಕತ್ತೆಯ ಬಣ್ಣಗಳಿಂದ ಮತ್ತು ಕತ್ತೆಯ ಸಾಮರ್ಥ್ಯದಿಂದ ಕೂಡಿವಂತಹ ಕುದುರೆಗಳು ಹಾಗೂ ಹೀನ ಲಕ್ಷಣಗಳಿಂದ ಕೂಡಿರುವ ಕುದುರೆಗಳು ರಾಜನನ್ನು, ರಾಜನ ಪುತ್ರರು, ಬಂಧು-ಬಾಂಧವರನ್ನು ಮತ್ತು ಪಶುಗಳನ್ನು ನಾಶಮಾಡುತ್ತವೆ. ಬೆಕ್ಕಿನಂತೆ ಬಣ್ಣ ಬಣ್ಣದ ಕಾಲುಗಳುಳ್ಳ ಕುದುರೆಯು ತನ್ನ ಸ್ವಾಮಿಗೆ ಕಷ್ಟವನ್ನು ಮತ್ತು ಅತ್ಯಂತ ಭಯವನ್ನು ಉಂಟುಮಾಡುತ್ತವೆ.

ಕೂದಲು ಮತ್ತು ಬಾಲಗಳಿಲ್ಲದೆ ಹುಟ್ಟಿದಂತಹ ಕುದುರೆಗಳು ರಾಜನನ್ನು ಸಂತತಿ ಹೀನನನ್ನಾಗಿಸುತ್ತದೆ. ಕಪ್ಪು ಮೂಗಿನ ಹೊಳ್ಳೆಯಿರುವಂತಹ ಕುದುರೆಯು ರಾಜ. ಅವನ ಮಕ್ಕಳು ಮತ್ತು ಬಂಧು-ಬಾಂಧವರನ್ನು ನಾಶಮಾಡುತ್ತವೆ.

ಯಾವ ಕುದುರೆಯ ತುಟಿಗಳು ಕಪ್ಪಾಗಿರುತ್ತವೋ ಅಂತಹ ಕುದುರೆಯ ಯಜಮಾನನು ನಾಶಹೊಂದುತ್ತಾನೆ. ಕಪ್ಪಾದ ಅಂಗುಳುಳ್ಳ ಕುದುರೆಯು ಸ್ವಾಮಿಯನ್ನೇ ಕಷ್ಟಕ್ಕೆ ಸಿಲುಕಿಸುತ್ತದೆ. ಯಾವಾಗಲೂ ಹಸಿವು ಬಾಯಾರಿಕೆಗಳಿಂದ ಕೂಡಿದ ದುಷ್ಟ ಕುದುರೆಯನ್ನು ರಾಜನು ತ್ಯಜಿಸಬೇಕು. ಯಾವ ಯಾವ ಕುದುರೆಯ ನಾಲಿಗೆಯಲ್ಲಿ ಕಪ್ಪಾದ ಬಣ್ಣವಿರುವುದೋ ಅಂತಹ ಕುದುರೆಯು ಒಡೆಯನಿಗೆ ಎಂದೂ ಶುಭವನ್ನುಂಟು ಮಾಡುವುದಿಲ್ಲ ಹಾಗೂ ಐಶ್ವರ್ಯವನ್ನು ಸರ್ವ ರೀತಿಯಿಂದಲೂ ನಾಶಮಾಡುತ್ತದೆ.

ಕಪ್ಪಾದ ಅಂಡಕೋಶವುಳ್ಳ ಕುದುರೆಯು ಒಡೆಯನಿಗೆ ವಧೆಯನ್ನು ಬಂಧನವನ್ನು ಉಂಟುಮಾಡುತ್ತದೆ ಹಾಗೂ ಖಡ್ಗ ಮೊದಲಾದ ಆಯುಧಗಳಿಂದ ತೊಂದರೆಯನ್ನು ಉಂಟುಮಾಡುತ್ತದೆ. ಕಪ್ಪಾದ ಕಟಬಾಯಿ, ತಲೆ ಹಾಗೂ ಅಂಡಕೋಶಗಳುಳ್ಳ ಕುದುರೆಗಳು ಒಡೆಯನನ್ನು ನಾಶಮಾಡುತ್ತದೆ. ಶರೀರದ

ಬಣ್ಣಕ್ಕಿಂತ ಬೇರೆಯಾದ ಬಣ್ಣವುಳ್ಳ ಬಾಲವನ್ನೋ, ತಲೆಯನ್ನೋ ಹೊಂದಿರುವ ಕುದುರೆಯು ಒಡೆಯನನ್ನು ನಾಶಗೊಳಿಸುತ್ತದೆ. ಆದುದರಿಂದ ಅಭಿವೃದ್ಧಿ ಹೊಂದಲ್ಲಿಚ್ಛಿಸುವವರು ಅದನ್ನು ಯುದ್ಧಭೂಮಿಯಲ್ಲಿ ಬಿಟ್ಟುಬಿಡಬೇಕು.

ಒಂದೇ ಬಣ್ಣದ ಕುದುರೆಯನ್ನು ನೋಡಿದರೂ ಅದರ ಬಾಲದ ತುದಿ ಬೇರೆ ಬಣ್ಣದಿಂದ ಕೂಡಿದ್ದರೆ ಹಾಗೂ ಕುದುರೆಯ ಬಾಲವು ಬೆಂಕಿಯಂತೆ ಹೊಳೆಯುತ್ತಿದ್ದರೆ, ಅಂತಹ ಕುದುರೆಯನ್ನು ಸುಖ ಬಯಸುವವರು ತ್ಯಜಿಸಬೇಕು. ಸೋರೆಬುರುಡೆಯ ಹೂವಿನ ರೀತಿಯಲ್ಲಿ ಕೂದಲಿದ್ದರೆ, ಗುಹ್ಯಾಂಗದಲ್ಲಿ, ಮುಖದಲ್ಲಿ, ಅಥವಾ ಕಣ್ಣುಗಳಲ್ಲಿ ಬಿಳುಪಿನ ಮಚ್ಚೆ ಕಂಡುಬಂದರೆ ಅಂತಹ ಕುದುರೆಗಳು ತನ್ನ ಸ್ವಾಮಿಯನ್ನು, ಮಕ್ಕಳನ್ನು ಹಾಗೂ ಕುಲಬಾಂಧವರನ್ನು ನಾಶಮಾಡುತ್ತವೆ.

ಯಾವ ಕುದುರೆಯು ಬಿಳಿಯ ಕತ್ತೆಯಂತೆ ಪೃಷ್ಠಭಾಗದಲ್ಲಿ ಬಣ್ಣ ಬಣ್ಣಗಳಿಂದ ಕೂಡಿದ ಸುಳಿಯನ್ನು ಹೊಂದಿದೆಯೋ ಅಂತಹ ಕುದುರೆಯನ್ನು ಖರಪೃಷ್ಠವಂಶ (ಬಿಳಿಯ ಕತ್ತೆಯ ಪೃಷ್ಠಭಾಗದಂತಿರುವ ಕುದುರೆ) ಎಂದು ತಿಳಿಯಬೇಕು. ಕುದುರೆಗಳ ಲಕ್ಷಣಗಳನ್ನು ಬಲ್ಲಂತಹವನು ಇಂತಹ ಕುದುರೆಯನ್ನು ಬಹಳ ದೂರದಿಂದಲೇ ತ್ಯಜಿಸಬೇಕು. ಮೃದುವಾದ ಮತ್ತು ಸ್ಪರ್ಶಕ್ಕೆ ಅಯೋಗ್ಯವಾದ ಅಂಡಕೋಶವುಳ್ಳ ಕುದುರೆಯು ಅಮಂಗಳಪ್ರದವಾದುದು, ಇಂತಹ ನಪುಂಸಕ ಕುದುರೆಯನ್ನು ಇಂದ್ರನಂತೆ ಉತ್ಕರ್ಷವನ್ನು ಬಯಸುವವನು ಬಿಟ್ಟುಬಿಡಬೇಕು.

ಯಾವ ಕುದುರೆಯ ತಲೆ ಕಪ್ಪಾಗಿದ್ದು ಶರೀರವೆಲ್ಲಾ ಬಿಳುಪಾಗಿರುತ್ತದೆಯೋ ಅಂತಹ ಕುದುರೆಗೆ 'ತ್ರಿಸರೀ' ಎಂದು ಹೆಸರು. ಇದು ಯಾರ ಬಳಿ ಇರುತ್ತದೆಯೋ ಅಂತಹವರ ಸಕಲ ಸಂಪತ್ತಾದಿಗಳು ನಾಶವಾಗುತ್ತವೆ. ಯಾವ ಕುದುರೆಯು ತನ್ನ ಬೆನ್ನ ಮೇಲೆ ಹತ್ತಿ ಸವಾರಿ ಮಾಡುವವರ ನಾಶವನ್ನು ಮಾಡುತ್ತದೆಯೊ

ಅಂತಹ ಕುದುರೆಯನ್ನು 'ಪ್ರೇತೋಪನೀತ' ಕುದುರೆ ಎಂದು ತಿಳಿಯಬೇಕು. ಇದು ಎಲ್ಲಾ ರೀತಿಯಿಂದಲೂ ಸಂಕಟವನ್ನುಂಟುಮಾಡುತ್ತದೆ. ಆದ್ದರಿಂದ ಆ ಕುದುರೆಯನ್ನು ಬಿಟ್ಟುಬಿಡಬೇಕು.

ಯಾವ ಕುದುರೆಯ ಬಾಲ, ತಲೆ, ಕೂದಲುಗಳು ಸುಟ್ಟ ಚರ್ಮದ ರೀತಿ ವಾಸನೆ ಬರುತ್ತದೋ ಅಂತಹ ಕುದುರೆಯ ಒಡೆಯನ ಮನೆಯು ನಿತ್ಯವೂ ಬೆಂಕಿಗೆ ಒಂದಲ್ಲಾ ಒಂದು ರೀತಿಯಲ್ಲಿ ಆಹುತಿಯಾಗುತ್ತದೆ. ಯಾವ ಕುದುರೆ ನಿರ್ಮಲವಾಗಿ ಪ್ರಸವ ಮಾಡುತ್ತದೋ ಅಂತಹ ಕುದುರೆ ಹಾಗೂ ಅದರ ಮರಿಯನ್ನು ರಾಜನು ಬ್ರಾಹ್ಮಣರಿಗೆ ದಾನ ಕೊಡಬೇಕು. ಅವುಗಳು ಬಹಳ ಸಂಖ್ಯೆಯಲ್ಲಿದ್ದರೂ ಅವುಗಳೆಲ್ಲವನ್ನೂ ದೂರದಿಂದಲೇ ತ್ಯಜಿಸಬೇಕು. ಹಣೆ, ತಲೆ, ಹುಬ್ಬು ಹಾಗೂ ಕಿವಿಗಳ ಬುಡದಲ್ಲಿ ಉಬ್ಬಿದ್ದರೆ ಅಥವಾ ಜಿಂಕೆಯ ಕೊಂಬಿನ ತುದಿಯಂತಿದ್ದರೆ, ಸುಕ್ಕಿದ್ದರೆ, ಮಾವಿನ ವಾಟೆಯಂತಿದ್ದರೆ ಅಥವಾ ಹಸುವಿನ ಕೆಚ್ಚಲಿನಂತಿದ್ದರೆ, ಅಥವಾ ಯಾವ ಕುದುರೆಗೆ ಚರ್ಮವು ಅಗುಳಿಯಂತೆ ಉಬ್ಬಿದರೆ ಅಥವಾ ಅರ್ಬುದ ರೋಗವಿದ್ದರೆ, ಬೆರಳಿನ ಒಂದು ಅಂಗುಲದಷ್ಟು ಕೊಂಬಿದ್ದರೆ ಅಂತಹ ಕುದುರೆಯನ್ನು ಶೃಂಗೀ ಕುದುರೆಯೆಂದು ಹೇಳುತ್ತಾರೆ. ಅಂತಹ ಕುದುರೆಗಳು ಯಾವಾಗಲೂ ರಾಜ ಮತ್ತು ರಾಷ್ಟ್ರವನ್ನು ನಾಶ ಮಾಡುತ್ತದೆ.

ಯಾವ ಕುದುರೆಯು ಮೂರು ಕಿವಿಗಳನ್ನು (ಕಿವಿಯ ಪಕ್ಕದಲ್ಲೊಂದು ಕಿವಿಯನ್ನು) ಹೊಂದಿರುತ್ತದೋ ಅಂತಹ ಕುದುರೆಯು ರಾಷ್ಟ್ರವನ್ನೂ, ರಾಜನನ್ನೂ, ಅವನ ಬಂಧುಗಳನ್ನೂ, ಸಕಲವನ್ನೂ ಅತ್ಯಂತ ಬೇಗನೆ ನಾಶಮಾಡುತ್ತದೆ. ಹಸುವಿನ ಗೊರಸಿಗೆ ಸಮನಾಗಿ ಎರಡು ಗೊರಸುಳ್ಳ, ಅಥವಾ ಹಸುವಿನ ಗೊರಸಿನ ತುದಿಗೆ ಸಮನಾಗಿ ಮತ್ತೊಂದು ಗೊರಸುಳ್ಳ ಕುದುರೆಯು ಶೃಂಗಿ

ಕುದುರೆಯಂತೆ ತನ್ನ ಒಡೆಯನನ್ನು ಹಾಗೂ ಅವನ ಸಮಸ್ತವನ್ನು ನಾಶಮಾಡುತ್ತದೆ.

ಹಸುವಿನ ಕೆಚ್ಚಲಿನಂತೆ ಒಂದರ ಪಕ್ಕದಲ್ಲೊಂದರಂತೆ ಎರಡು ಮೂತ್ರಕೋಶವುಳ್ಳ ಕುದುರೆಯನ್ನು ಸ್ತನೀಕುದುರೆಯೆಂದು ಕರೆಯುತ್ತಾರೆ. ಆ ಕುದುರೆಯು ರಾಷ್ಟ್ರಕ್ಕೆ ಸಂಕಟವನ್ನು ಹಾಗೂ ನಾಶವನ್ನು ಉಂಟುಮಾಡುತ್ತದೆ. ಮಂಡಿಗಳಲ್ಲಿ ಹುಬ್ಬುಗಳ ಮಧ್ಯಭಾಗದಲ್ಲಿ ಹಾಗೂ ಗೊರಸುಗಳ ಬಳಿಯಲ್ಲಿ ಇನ್ನೊಂದು ಪಾದವು (ಉಬ್ಬಿದಂತೆ) ಕಂಡುಬಂದರೆ ಆ ಕುದುರೆಯನ್ನು **'ಪಂಚಶಫ'** (ಐದು ಗೊರಸುಳ್ಳದ್ದು) ಎಂದು ತಿಳಿಯಬೇಕು. ಅಂತಹ ಕುದುರೆಯು ಶೃಂಗೀ ಕುದುರೆಯಂತೆ ರಾಜ ಹಾಗೂ ರಾಷ್ಟ್ರವನ್ನು ನಾಶಮಾಡುತ್ತದೆ.

ಯಾವ ಕುದುರೆಗೆ ಕತ್ತಿನ ಕೆಳಭಾಗದಿಂದ ಹಿಡಿದು ಬಾಲದವರೆಗೆ (ಅಂದರೆ ಹೆಗಲು, ಭುಜ, ಬೆನ್ನು ಹಾಗೂ ಅದರ ಜಘನಭಾಗದವರೆವಿಗೆ) ಜಿಂಕೆಯಂತೆ ಚರ್ಮವಿದ್ದರೆ ಅಂತಹ ಕುದುರೆಯು ತಿಳಿದವರಿಂದ (ಅಶ್ವಶಾಸ್ತ್ರಜ್ಞರಿಂದ) ನಿಂದಿತವಾಗಿದೆ. ಜಿಂಕೆಯಂತಹ ಚರ್ಮ ಕುದುರೆಯ ಬೆನ್ನ ಮೇಲಿದ್ದರೆ ಒಡೆಯನ ನಾಶ, ಹೆಗಲ ಮೇಲಿದ್ದರೆ ಒಡೆಯನನ್ನು ಕೊಲ್ಲುವುದು, ಭುಜಗಳ ಮೇಲಿದ್ದರೆ ಮಕ್ಕಳ ನಾಶ ಜಘನ ಭಾಗದಲ್ಲಿದ್ದರೆ ಹೆಂಡತಿಯ ನಾಶವೆಂದು ಹೇಳಲ್ಪಟ್ಟಿದೆ.

ಶೃಂಗೀ ಮೊದಲಾದ ಆರು ದೋಷಗಳು ಅತ್ಯಂತ ಮಹಾ ದೋಷಯುಕ್ತ-ವಾದವುಗಳು ಹಾಗೂ ಅತ್ಯಂತ ಭಯಂಕರವಾದವು ಎಂದು ಋಷಿಶ್ರೇಷ್ಠರು ಹೇಳಿದ್ದಾರೆ. ಇಂತಹ ಅಮಂಗಳಪ್ರದವಾದ ಕುದುರೆಗಳು ರಾಜನನ್ನು ಹಾಗೂ ರಾಷ್ಟ್ರವನ್ನು ನಾಶಮಾಡುವುದರಿಂದ ಇವುಗಳನ್ನು ತ್ಯಜಿಸಬೇಕು.

ಯಾವ ರೀತಿಯಾಗಿ ಗರ್ಗಮುನಿಯಿಂದ ಹೇಳಲ್ಪಟ್ಟಿದೆಯೋ ಅದನ್ನು ಈಗ ಹೇಳಲ್ಪಡುತ್ತದೆ. ಮೇಲೆ ಹೇಳಿದ ದೋಷಗಳಿಗೆ ಯಾವ ರೀತಿಯಲ್ಲಿಯೂ

ಪರಿಹಾರೋಪಾಯವಿರುವುದಿಲ್ಲ. ಈ ಎಲ್ಲಾ ದೋಷಗಳಿಂದ ಕೂಡಿದ ನೀಚಕುದುರೆಗಳನ್ನು ತ್ಯಜಿಸಬೇಕು. ಅಂತಹ ಕುದುರೆಗಳನ್ನು ರಾಜನಾಗಲೀ ಅಥವಾ ಬೇರೆ ಯಾರೇ ಆಗಲಿ ಎಂದಿಗೂ ಮುಟ್ಟಬಾರದು. ಒಂದು ವೇಳೆ ಅಂತಹ ಕುದುರೆಯನ್ನು ನೋಡಿದರೆ ಸೂರ್ಯನನ್ನು ನೋಡಬೇಕು. ಅಂತಹ ಕುದುರೆಯನ್ನು ಮುಟ್ಟಿದರೆ ಸ್ನಾನ ಮಾಡಬೇಕು. ಮತ್ತು ಬ್ರಾಹ್ಮಣಶ್ರೇಷ್ಠರನ್ನು ಪೂಜಿಸಿ ಅವರಿಗೆ ಚಿನ್ನವನ್ನು ದಾನವಾಗಿ ಕೊಡಬೇಕು. ಆದುದರಿಂದ ರಾಜನು ಅಂತಹ ಕುದುರೆಗಳನ್ನು ದೇಶದಿಂದ ಹೊರಗೋಡಿಸಿ ದೇವರಿಗೆ ನಮಸ್ಕರಿ-ಸುವುದರಿಂದಲೂ ಶಾಂತಿ ಕರ್ಮಗಳಿಂದಲೂ ದೋಷ ಪರಿಹಾರ ಮಾಡಿಕೊಳ್ಳಬೇಕು.

ಹೀಗೆ ಕುದುರೆಗಳಲ್ಲಿರುವ ದೋಷಗಳನ್ನು ದ್ವಿಜರಿಗೆ ಪೂಜೆಮಾಡುವುದರಿಂದ ಶಮನ ಗೊಳಿಸಬಹುದು. ಶೃಂಗಿ ಕುದುರೆಯ ಕೊಂಬು ಅಗುಳಿಯಂತೆ ಉಬ್ಬಿರುವುದರಿಂದ, ಆ ಕೊಂಬನ್ನು ಕತ್ತರಿಸುವುದರಿಂದ ದೋಷವು ಶಮನಗೊಳ್ಳುತ್ತದೆ ಮತ್ತು ಹೂವುಗಳಂತೆ ಸುಳಿ ಇದ್ದರೆ ಚಿನ್ನದಿಂದ ಕಿವಿಗಳನ್ನು ಸುಟ್ಟು ಬ್ರಾಹ್ಮಣರನ್ನು ಪೂಜಿಸಬೇಕು.

ಪ್ರಜೆಗಳ ರಕ್ಷಣೆಯಲ್ಲೇ ತತ್ಪರನಾದ ಪರಾಕ್ರಮಿಯಾದ, ಸದಾ ಧರ್ಮ ಕಾರ್ಯದಲ್ಲಿ ಆಸಕ್ತನಾದ ಹೋಮ-ಜಪಾದಿಗಳನ್ನು ಮಾಡುವ ದಾನಶೀಲ ರಾಜ ಅಥವಾ ಬೇರೆ ಯಾವ ರಾಜರೇ ಆಗಲಿ ಹೋಮ-ಜಪಾದಿಗಳನ್ನು ಮಾಡುವುದರಿಂದ ಈ ಕುದುರೆಗಳಿಂದ ಉಂಟಾಗುವ ದೋಷಗಳು ನಾಶವಾಗುತ್ತವೆ.

ದುರಾಸೆಯಿಲ್ಲದ, ಸತ್ತ್ವಶಾಲಿಯಾದ ಮನುಷ್ಯನು ಮತ್ತು ಯಜ್ಞ-ಯಾಗಾದಿಗಳನ್ನು ಮಾಡಿಸುವವನು, ಹೋಮಾದಿಗಳನ್ನು ಮಾಡುವವನು. ವೇದ ಪಾರಂಗತನಾದ ದ್ವಿಜನು ಈ ದೋಷಗಳಿಗೆ ಒಳಗಾಗುವುದಿಲ್ಲ.

## 6. ವಯೋಜ್ಞಾನ

ದೋಷಗಳ ಲಕ್ಷಣವನ್ನು ಹೇಳಿದ ಮೇಲೆ ವಯಸ್ಸಿನ ಬಗ್ಗೆ ಹೇಳಲ್ಪಡುತ್ತದೆ. ಕುದುರೆಯ ವಯಸ್ಸಿನ ಬಗೆಗೆ ತಿಳುವಳಿಕೆಯುಳ್ಳ ಜನರನ್ನು ಎಲ್ಲರೂ ಇಷ್ಟಪಡುತ್ತಾರೆ.

ಕುದುರೆಯ ವಯಸ್ಸಿನ ತಿಳುವಳಿಕೆ ಎರಡು ವಿಧವಾಗಿದೆ. ಬಾಹ್ಯ ಹಾಗೂ ಆಂತರಿಕ ಎಂದು. ಬಾಹ್ಯ ಎಂದರೆ ಹೊರಗಿನದು ಅಂದರೆ ಶರೀರದ ಮೇಲ್ಭಾಗದಲ್ಲಿ ಕಂಡುಬರುವುದು ಮತ್ತು ಆಂತರಿಕ ಎಂದರೆ ಶರೀರದ ಒಳಭಾಗದಲ್ಲಿರುವ ಹಲ್ಲುಗಳಿಗೆ ಸಂಬಂಧಿಸಿದುದು.

**ಮೊದಲನೆಯ ವರ್ಷದ ಸಾಲು –**

ಕುದುರೆಯ ಮರಿಯು ಒಂದು ತಿಂಗಳಿನದಾಗಿದ್ದರೆ, ಅದರ ವಸಡು ಸ್ವಲ್ಪ ಉಬ್ಬಿದಂತೆ ಕಾಣುತ್ತದೆ (ಅಂದರೆ ವಸಡಿನಲ್ಲಿರುವ ಹಲ್ಲುಗಳು ಸ್ಪಷ್ಟವಾಗಿ ಗೋಚರಿಸುವುದಿಲ್ಲ. ವಸಡು ಸ್ವಲ್ಪ ಮೇಲೆ ಬಂದಂತೆ ಕಾಣುತ್ತದೆ). ಎರಡು ತಿಂಗಳ ಮರಿಯಾಗಿದ್ದರೆ ಆ ಹಲ್ಲುಗಳು ಗೋಚರಿಸಲ್ಪಡುತ್ತವೆ. ಮೂರು ತಿಂಗಳ ಮರಿಯಾಗಿದ್ದರೆ ಮಧ್ಯಭಾಗದಲ್ಲಿ ಹಲ್ಲುಗಳಿರುತ್ತವೆ.

ವಸಡುಗಳ ಮಧ್ಯಭಾಗದ ಹಲ್ಲುಗಳು ಸಂಪೂರ್ಣ ಇದ್ದಲ್ಲಿ ಹಾಗೂ ದವಡೆಯಲ್ಲಿ ಹಲ್ಲುಗಳು ಕಂಡೂ ಕಾಣದಂತೆ ಸೂಕ್ಷ್ಮವಾಗಿದ್ದು ಹೊಂಬಣ್ಣದಿಂದ ಹೊಳೆಯುತ್ತಿದ್ದರೆ ಆವಾಗ ಅದು ಐದು ತಿಂಗಳ ಕುದುರೆಯ ಮರಿಯೆಂದು ತಿಳಿಯಬೇಕು. ಹಲ್ಲುಗಳ ತುದಿಯು ಸಂಪೂರ್ಣವಾಗಿ ಬೆಳೆದಿದ್ದರೆ ಆವಾಗ ಆ ಕುದುರೆಯ ಮರಿಯು ಆರನೆಯ ತಿಂಗಳಿಗೆ ಕಾಲಿಟ್ಟಿದೆ ಎಂದರ್ಥ. ಹಲ್ಲುಗಳು ಬಿಡಿಬಿಡಿಯಾಗಿ (ಸ್ಪಷ್ಟವಾಗಿ) ಮೇಲೆ ಬಂದಿದ್ದರೆ ಏಳನೆಯ ತಿಂಗಳ ಕುದುರೆಯೆಂದು ತಿಳಿಯಬೇಕು.

10

ಕುದುರೆಯ ಮರಿಯ ಎರಡು ದವಡೆಯ ಹಲ್ಲುಗಳು ಬಿಳುಪಾಗಿದ್ದರೆ ಎಂಟನೆಯ ತಿಂಗಳೆಂದು ತಿಳಿಯಬೇಕು. ಕುದುರೆಯ ಮರಿ ಒಂಬತ್ತನೆಯ ತಿಂಗಳು ತುಂಬಿದಾಗ ದವಡೆಯ ಹಲ್ಲುಗಳು ಸಂಪೂರ್ಣವಾಗಿ ಬೆಳೆದಿರುತ್ತವೆ.

**ಎರಡನೆಯ ವಯಸ್ಸಿನಿಂದ ಐದನೆಯ ವಯಸ್ಸಿನ ಅವಧಿ –**

ಒಂದು ವರ್ಷದ ವಯಸ್ಸಿನ ಕುದುರೆಯ ಹಲ್ಲುಗಳು ಬಿಳುಪಾಗಿರುತ್ತವೆ. ಎರಡನೆಯ ವರ್ಷದ ವಯಸ್ಸಿನ ಕುದುರೆಯ ಹಲ್ಲುಗಳು ಕಾವಿಬಣ್ಣದ್ದಾಗಿರುತ್ತವೆ ಹಾಗೂ ಮೂರನೆಯ ವಯಸ್ಸಿನ ಕುದುರೆಯ ಹಲ್ಲುಗಳು ಬಿದ್ದು ಮತ್ತೆ ಹುಟ್ಟಿರುತ್ತವೆ. ಮಧ್ಯಭಾಗದ ಹಲ್ಲುಗಳು ಬಿದ್ದು ಹುಟ್ಟಿದ್ದರೆ ಆ ಕುದುರೆಯು ನಾಲ್ಕನೆಯ ವರ್ಷದ ವಯಸ್ಸಿನ ಕುದುರೆಯೆಂದು ತಿಳಿಯಬೇಕು. ದವಡೆಯ ಹಲ್ಲುಗಳು ಬಿದ್ದು ಹುಟ್ಟಿದ್ದರೆ ಐದು ವರ್ಷಕ್ಕೆ ಮೇಲ್ಪಟ್ಟ ಕುದುರೆಯೆಂದು ತಿಳಿಯಬೇಕು.

ಹಲ್ಲುಗಳು ಬಿದ್ದು ಹುಟ್ಟಿರುವುದರಿಂದ ಶಕ್ತಿಯುತವಾದ, ತುಪ್ಪದ ಬಣ್ಣದಂತೆ ಹೊಳೆಯುತ್ತಿರುವ ಚಕ್ರಾಕಾರದ ಹಲ್ಲುಗಳ ಸಾಲುಳ್ಳ ಎಲ್ಲ ದವಡೆಯ ಹಲ್ಲುಗಳುಳ್ಳ ಎಲ್ಲ ಅವಯವಗಳು ಸಂಪೂರ್ಣವಾಗಿ ಬೆಳೆದು ಮೈತುಂಬಿಕೊಂಡು, ಸಂತೋಷ ತುಂಬಿದ ಇಂದ್ರಿಯಗಳಿಂದ ಕೂಡಿ, ಪ್ರಸನ್ನತೆಯನ್ನುಂಟುಮಾಡುವ ಚೆನ್ನಾಗಿ ಬೆಳೆದ ಕೂದಲುಗಳಿಂದ ಕೂಡಿ, ಎಲ್ಲ ಕೆಲಸಗಳನ್ನು ಮಾಡುವ ಸಾಮರ್ಥ್ಯವನ್ನು ಹೊಂದಿರುವ ಹಾಗೂ ಚುರುಕಾಗಿರುವ ಕುದುರೆಯ ಮರಿಯು ಐದು ವರ್ಷ ವಯಸ್ಸಿನದಾಗಿರುತ್ತದೆ.

ಚಿಕ್ಕದಾಗಿ, ಕೃಶವಾಗಿ, ಒಂದೇ ಸಮನಾಗಿ (ಅಂದರೆ ಅಂಕುಡೊಂಕು ಇಲ್ಲದೆ) ದೃಢವಾಗಿ, ಚೂಪಾಗಿ ಮತ್ತು ಹಾಲಿನಂತೆ ಬಿಳುಪಾಗಿ ನೇರವಾಗಿ ಸುಸ್ಪಷ್ಟವಾಗಿ ಗೋಚರಿಸುವ ಹಲ್ಲುಳ್ಳ ಕುದುರೆಯನ್ನು ಬಾಲ್ಯಾವಸ್ಥೆಯ ಕುದುರೆಯೆಂದು ತಿಳಿಯಬೇಕು.

ಬಿಳುಪಾದ ಉದ್ದವಾದ ಚೆನ್ನಾಗಿ ಹೆಣೆಯಲ್ಪಟ್ಟ ಚೂಪಾದ ತುದಿಗಳುಳ್ಳ ವಿಶಾಲವಾದ ಗಟ್ಟಿಯಾದ ಚೆನ್ನಾಗಿ ವಿಭಾಗಿಸಲ್ಪಟ್ಟ (ಅಂದರೆ ಹಲ್ಲುಗಳೂ ಒಂದರ ಮೇಲೊಂದಿರದೆ ಅಥವಾ ದೂರದೂರವಾಗಿರದೆ ಒಂದೇ ಸಮನಾಗಿ ಜೋಡಿಸಿದಂತೆ ಇರುವ) ಹಾಗೂ ಮೇಲ್ಭಾಗದ ಹಲ್ಲುಗಳು ಬಿದ್ದು ಹುಟ್ಟಿದ್ದರೆ ಅಂತಹ ಕುದುರೆಗಳಿಗೆ 'ಪ್ರದಿಷ್ಟಾ' ಕುದುರೆಗಳೆಂದು ಕರೆಯುತ್ತಾರೆ.

ಮೊದಲನೆಯ ವಯಸ್ಸಿನ ಕುದುರೆಯ ವಸಡು, ಎರಡನೆಯ ಹಾಗೂ ಮೂರನೆಯ ವಯಸ್ಸಿನಲ್ಲಿ ವಸಡಿನ ಮಧ್ಯ ಹಾಗೂ ಕೊನೆಯ ಭಾಗವು ಕುದುರೆಗಳ ವಯಸ್ಸನ್ನು ತಿಳಿಯುವ ಗುರುತಾಗಿರುತ್ತವೆ. ಕಪ್ಪು, ಹಸಿರು ಅಚ್ಚಬಿಳುಪು ಹಾಗೂ ಕಾಗೆಬಂಗಾರದ ಬಣ್ಣದಂತಿರುವ ಬಣ್ಣ, ಜೇನುನೊಣದ ದೇಹದ ಬಣ್ಣದಂತಿರುವ ಬಣ್ಣ, ಶಂಖದ ತೂತಿನಂತಿರುವ, ಹಾಗೆಯೇ ಚಲಿಸಿದಂತೆ ಕಾಣುವ ಗುರುತಿದ್ದರೆ ಅದು ಆರನೆಯ ವಯಸ್ಸಿನ ಕುದುರೆಯೆಂದು ತಿಳಿಯಬೇಕು.

ಕೆಲವು ಕುದುರೆಗಳು ವಯಸ್ಸಾಗಿಲ್ಲದಿದ್ದರೂ ವಯಸ್ಸಾದಂತೆ ಕಾಣುತ್ತವೆ. ಮತ್ತೆ ಕೆಲವು ವಯಸ್ಸಾಗಿದ್ದರೂ ತಾರುಣ್ಯದಲ್ಲಿರುವಂತೆ ಕಾಣುತ್ತವೆ. ಇನ್ನೂ ಕೆಲವು ಕುದುರೆಗಳು ಅತ್ಯಧಿಕವಾಗಿ ಆಕರ್ಷಿಸುತ್ತವೆ. ಕುದುರೆಯ ವಯಸ್ಸಿನ ಪರೀಕ್ಷೆಗೆ ಅದರ ಗೊರಸು. ಕೂದಲು, ಹಲ್ಲು ಹಾಗೂ ಅದರ ಚಲನವಲನಗಳು, ಕುದುರೆಯ ತೇಜಸ್ಸು, ಶಕ್ತಿ, ಮಾತುಗಳಿಗೆ ಸ್ಪಂದಿಸುವ ರೀತಿ, ಗುಂಪಿನಲ್ಲಿ ಅದರ ನಡವಳಿಕೆ, ಬೇರೆ ಅಶ್ವದ ಜೊತೆ (ಅನ್ಯಲಿಂಗದ ಅಶ್ವದ ಜೊತೆ) ನಡೆದುಕೊಳ್ಳುವ ರೀತಿ, ಇವುಗಳಿಂದ ಅಶ್ವಜ್ಞರು ಅದರ ವಯಸ್ಸಿನ ಬಗ್ಗೆ ತಿಳಿಯುತ್ತಾರೆ. ಉದ್ದವಾದ ಚತುಷ್ಕೋಣಾಕಾರದ ಗೆರೆಯುಳ್ಳ ಅಥವಾ ಅಡ್ಡವಾದ ಗೆರೆಯುಳ್ಳ, ಅನಿಷ್ಟವನ್ನು ಸೂಚಿಸುವ ಬಣ್ಣ (ಕಪ್ಪುಬಣ್ಣ) ಅಥವಾ ದುಂಬಿಯಂತಿರುವ ಚಿಹ್ನೆ, ಹಾಗೆಯೇ ಹಲ್ಲುಗಳು ತಂತುವಿಗೆ ಸಮಾನವಾದ

ಬಣ್ಣ, ಹಸಿರು ಬಣ್ಣ, ಹಾಲು ಅಥವಾ ಮೊಸರಿನಂತೆ ಬಿಳುಪಾದ ಬಣ್ಣ, ಬಿಳಿಸಾಸುವೆಯಂತೆ ಬಿಳಿಯ ಬಣ್ಣ, ಕಾಗೆಬಂಗಾರದಂತಹ ಬಣ್ಣ, ನವಣೆಯ ಬಣ್ಣದಂತೆ ಬಣ್ಣವಿದ್ದರೆ, ಜೇನುನೊಣದ ಶರೀರದ ಬಣ್ಣಕ್ಕೆ ಸಮಾನವಾದ ಬಣ್ಣವಿದ್ದರೆ ಆ ರೀತಿಯಾದ ಬಣ್ಣವನ್ನು ಜೇನುಗಳ ಬಗ್ಗೆ ತಿಳಿದಿರುವ ಬುದ್ಧಿವಂತರಿಂದ ತಿಳಿಯಲ್ಪಡುತ್ತದೆ.

ಶಂಖದಂತೆ ಹಾಗೂ ಶಂಖದ ತುದಿಯ ಭಾಗದಂತಿದ್ದರೆ ಹಲ್ಲುಗಳ ಮಧ್ಯಭಾಗದಲ್ಲಿ ಒರಳಿನ ಕುಳಿಯಂತಿದ್ದರೆ, ಹಲ್ಲುಗಳು ಚಲಿಸುವಾಗಿನ ಚಲನೆ, ಬೀಳುವಂತಹ ಹಲ್ಲುಗಳು ಹಾಗೂ ಬಿದ್ದ ಹಲ್ಲುಗಳು ಈ ರೀತಿಯಾಗಿ ಕಪ್ಪು ಹಸಿರು ಬಿಳುಪು ಬಣ್ಣಗಳು ಹಾಗೂ ಕಾಗೆಬಂಗಾರದಂತಹ ಬಣ್ಣ ಜೇನುನೊಣದ ಶರೀರದ ಬಣ್ಣ ಹಾಗೆಯೇ ಶಂಖದಂತಿದ್ದರೆ, ಒರಳಿನ ಕುಳಿಯಂತಿದ್ದರೆ, ಹಲ್ಲುಗಳ ಚಲಿಸುವಿಕೆಯ ಆಧಾರದ ಮೇಲೆ ಹಾಗೂ ಹಲ್ಲುಗಳು ಬೀಳುವಂತಹ ಕ್ರಮ ಈ ಎಲ್ಲಾ ವಿಷಯಗಳನ್ನು ವಯಸ್ಸಿನ ಪರೀಕ್ಷೆಗೆ ಹೇಳಲಾಗಿದೆ.

**ಆರು ವರುಷದಿಂದ ಮೂವತ್ತೆರಡರ ವಯಸ್ಸಿನವರೆವಿಗೆ –**

ಆರನೆಯ ವರ್ಷದಲ್ಲಿರುವ ಕುದುರೆಯ ವಸಡಿನ ಮಧ್ಯಭಾಗದ ಹಲ್ಲುಗಳು ಆರು ವರ್ಷದ ಹಸುವಿನಂತೆ ಕಾಣುತ್ತವೆ. ಎಂಟನೆಯ ವಯಸ್ಸಿನಲ್ಲಿರುವ ಕುದುರೆಯ ಹಲ್ಲುಗಳು ಕಪ್ಪು ಬಣ್ಣದ್ದಾಗಿರುತ್ತವೆ. ಒಂಬತ್ತು ಹತ್ತು ಹನ್ನೊಂದನೆಯ ವಯಸ್ಸಿನಲ್ಲಿರುವ ಕುದುರೆಯ ಹಲ್ಲುಗಳು ತಂತುವಿನ ಹಾಗೆ ಹಸಿರು ಬಣ್ಣದ್ದಾಗಿರುತ್ತದೆ.

ಕುದುರೆಯ ವಸಡಿನ ಮಧ್ಯ ಹಾಗೂ ಕೊನೆಯ ಭಾಗದಲ್ಲಿ ಹಲ್ಲುಗಳನ್ನು ಸೂಕ್ಷ್ಮವಾಗಿ ಗಮನಿಸುವುದರಿಂದ ಹನ್ನೊಂದನೆಯ ವಯಸ್ಸಿನದೆಂದು ಬುದ್ಧಿವಂತರು ತಿಳಿಯುತ್ತಾರೆ. ಈ ರೀತಿಯಾಗಿ ಕುದುರೆಯ ಹನ್ನೆರಡನೆಯ

ವಯಸ್ಸನ್ನು ಹಲ್ಲುಗಳು ಬಿಳಿಸಾಸುವೆಯಂತೆ ಬಿಳುಪಾಗಿರುವುದರಿಂದ ತಿಳಿಯಬಹುದು. ಹದಿಮೂರು ಹಾಗೂ ಹದಿನಾಲ್ಕನೆಯ ವಯಸ್ಸನ್ನು ಕುದುರೆಯ ದವಡೆಯ ಮಧ್ಯ ಹಾಗೂ ಕೊನೆಯ ಭಾಗ ಉಬ್ಬಿರುವುದರಿಂದ ತಿಳಿಯಬಹುದು. ಕಾಗೆಬಂಗಾರದಂತಹ ಬಣ್ಣ ಇದ್ದರೆ ಹದಿನೈದು ಹಾಗೂ ಹದಿನಾರನೆಯ ವಯಸ್ಸಿನ ಕುದುರೆಯೆಂದು, ಅದಕ್ಕೂ ಮುಂದೆ (ಇದಾದ ನಂತರ) ಕುದುರೆಯ ಬಾಯಿಯ ಮುಂಭಾಗದ, ಮಧ್ಯಭಾಗದ ಹಾಗೂ ದವಡೆಯ ಹಲ್ಲುಗಳು ಇವುಗಳ ಮೂಲಕ ಹದಿನೆಂಟು, ಹತ್ತೊಂಬತ್ತನೆಯ ವಯಸ್ಸಿನದೆಂದು ತಿಳಿಯಬೇಕು. ಇಪ್ಪತ್ತನೆಯ ವಯಸ್ಸಿನ ಕುದುರೆಗಳ ದವಡೆಯ ಮಧ್ಯಭಾಗ ಹಾಗೂ ಕೊನೆಯ ಭಾಗವು ಜೇನುನೊಣದ ಶರೀರದ ಬಣ್ಣದಂತೆ ಇರುತ್ತವೆ.

ಇದೇ ಕ್ರಮದಲ್ಲಿ ಶಂಖದಂತೆ, ಒರಳಿನಲ್ಲಿರುವ ತೂತಿನಂತೆ, ಚಲಿಸುವಿಕೆಯ ಬಗೆಗೆ, ಹಲ್ಲುಗಳ ಬೀಳುವಿಕೆ ಈ ಎಲ್ಲಾ ಲಕ್ಷಣಗಳು ಕುದುರೆಗಳ ವಯಸ್ಸಿನಲ್ಲಿ ಮೂರು ಮೂರು ವರ್ಷ ಅಂತರವನ್ನು ಕ್ರಮವಾಗಿ ತಿಳಿಸುತ್ತವೆ.

ದಷ್ಟಪುಷ್ಟವಾದ ಮಾಂಸಖಂಡಗಳಿಂದ ಕೂಡಿ, ಶ್ರೇಷ್ಠವಾದ ಆನೆಯಂತೆ ಇರುವ, ಮೋಡದ ದನಿಯಂತೆ ಗಂಭೀರವಾಗಿ ಕೆನೆಯುವ, ಎಲ್ಲವನ್ನೂ ಸಹಿಸಿಕೊಳ್ಳುವ, ತೇಜಸ್ಸಿನಿಂದ ಕೂಡಿದ, ಸತ್ತ್ವಗುಣಯುತವಾದ, ಉತ್ಕೃಷ್ಟವಾದ ಶಕ್ತಿ ಹಾಗೂ ವೇಗವುಳ್ಳ, ಸಂಪೂರ್ಣವಾದ ಸಕಲ ಅವಯವಗಳಿಂದ ಕೂಡಿದ ಶರೀರವುಳ್ಳ, ಹಸಿವು ಬಾಯಾರಿಕೆಗಳನ್ನು ಸಹಿಸಿಕೊಳ್ಳುವ, ಮಾರ್ಗಮಧ್ಯದಲ್ಲಿ ಉಂಟಾಗುವ ಶೀತ, ಬಿಸಿಲಿನ ಬೇಗೆ, ಬಿರುಗಾಳಿಯ ಹೊಡೆತಗಳನ್ನು ಸಹಿಸಿಕೊಳ್ಳುವ, ಪ್ರಶಾಂತವಾದ ಇಂದ್ರಿಯಗಳನ್ನು ಹೊಂದಿರುವ ವಯಸ್ಸಾದ ಕುದುರೆಯು (ಈ ಮೇಲೆ ಹೇಳಿದ ಗುರುತುಗಳಿಂದ) 'ಕಾಲಿಕಾವ್ಯಂಜನಾಶ್ವ' ಎಂದು ಹೇಳಲ್ಪಟ್ಟಿದೆ.

ಗಟ್ಟಿಯಾದ ಮಾಂಸಖಂಡಗಳುಳ್ಳ, ತೇಜಸ್ಸಿನಿಂದ ಕೂಡಿದ, ಬಲಿಷ್ಠವಾದ, ಹಸಿವು–ಬಾಯಾರಿಕೆಗಳನ್ನು ಯಾವಾಗಲೂ ಸಹಿಸಿಕೊಳ್ಳುವ, ಒಳ್ಳೆಯ ಆಕಾರವುಳ್ಳ, ಗಂಭೀರವಾಗಿ ಕೆನೆಯುವಂತಹ ಕುದುರೆಯನ್ನು 'ಹರಿಣೀವ್ಯಂಜನಾಶ್ವ' ಎಂದು ಕರೆಯುತ್ತಾರೆ.

ಬಲ, ವೇಗ, ತೇಜಸ್ಸು ಹಾಗೂ ಒಳ್ಳೆಯ ರೂಪದಿಂದ ಕೂಡಿದ ಹಣೆಯ ಹಿಂಭಾಗದಲ್ಲಿ ಸುಳಿಗಳಿಲ್ಲದೆ ನೆರೆತ ಕೂದಲುಗಳುಳ್ಳ ಕುದುರೆಯನ್ನು 'ಶುಕ್ಲವ್ಯಂಜನ'ವೆಂಬ ಕುದುರೆಯೆಂದು ತಿಳಿಯಬೇಕು.

ಮಾಂಸರಹಿತವಾದ (ಕೃಶವಾದ) ಶರೀರದಿಂದ ಕೂಡಿದ, ವೇಗವಾಗಿ ಚಲಿಸದ, ಸ್ನಾಯುಗಳಿಂದ ಕೂಡಿದ (ನರಮಂಡಲದಿಂದ ಕೂಡಿದ), ದಪ್ಪವಾದ ಮಂಡಿಯುಳ್ಳ, ನಪುಂಸಕವಾದ, ಕೆಟ್ಟ ಬಣ್ಣವುಳ್ಳ, ಉದ್ದವಾದ ಹಲ್ಲುಗಳುಳ್ಳ ಕುದುರೆಯು 'ಕಾಚಾವ್ಯಂಜನ' ಕುದುರೆ ಎನಿಸುತ್ತದೆ.

ಕಿವಿಯ ಹಿಂಭಾಗದಲ್ಲಿ ನೆರೆತ ಕೂದಲುಗಳುಳ, ಸುಳಿಗಳುಳ್ಳ, ಉದುರಿದ ಹಲ್ಲುಗಳುಳ್ಳ, ದುರ್ಬಲವೂ ನಿರುತ್ಸಾಹಿಯೂ ಆದ, ದುಃಖಗೊಂಡಿರುವ, ಸಂಕುಚಿತವಾದ ಕಣ್ಣುಳ್ಳ ಕುದುರೆಯನ್ನು 'ಮಕ್ಷಿಕಾವ್ಯಂಜನ' ಕುದುರೆ ಎನ್ನುತ್ತಾರೆ.

ಗಂಭೀರವಾದ ನೋಟವುಳ್ಳ, ದೀನವಾದ ಕುದುರೆಯನ್ನು 'ಶಂಖವ್ಯಂಜನ' ಕುದುರೆ ಎಂದು ಕರೆಯುತ್ತಾರೆ.

ಮಾಂಸರಹಿತವಾದ, ಸಂತೋಷ ಹಾಗೂ ಕೋಪಗಳಿಲ್ಲದ ಕುದುರೆಯನ್ನು 'ಉಲೂಖಲ' ಕುದುರೆ ಎಂದು ಕರೆಯುತ್ತಾರೆ.

ನಿಧಾನವಾಗಿ ಆಹಾರವನ್ನು ತಿನ್ನುವ, ಹಲ್ಲುಗಳು ಬಿದ್ದಿರುವ ಕುದುರೆಗೆ ಮೂವತ್ತೆರಡನೆಯ ವಯಸ್ಸಿನ ಕುದುರೆಯೆಂದು ತಿಳಿಯಬೇಕೆಂದು ಹೇಳಲ್ಪಟ್ಟಿದೆ.

ಯಾವ ರೀತಿಯಾಗಿ ಆನೆಗೆ 120 ವರ್ಷಗಳು ಪೂರ್ಣಾಯುಷ್ಯವೆಂದು, ಮನುಷ್ಯರಿಗೆ 100 ವರ್ಷಗಳು ಪೂರ್ಣಾಯುಷ್ಯವೆಂದು ಹೇಳಲಾಗಿದೆಯೋ ಅದೇ ರೀತಿಯಾಗಿ ಕುದುರೆಗಳಿಗೆ 32 ವರ್ಷಗಳು ಪೂರ್ಣಾಯುಷ್ಯವೆಂದು ಗರ್ಗಮುನಿಗಳು ಹೇಳಿದ್ದಾರೆ.

ಕುದುರೆಗಳ ಪಾಲಕನ ಆಶ್ರಯದಲ್ಲಿರುವ ಕುದುರೆಗಳಲ್ಲಿ ಉಂಟಾಗುವ ಬೆಳವಣಿಗೆ. ಕ್ಷೀಣಿಸುವಿಕೆ ಮತ್ತು ಗತಿ ಇವುಗಳನ್ನು ಅರಿತು ಆ ಕುದುರೆಗಳ ಜಾತಿಯನ್ನು ತಿಳಿಯಬೇಕು.

**ಕುದುರೆಗಳ ವಿಶೇಷಲಕ್ಷಣಗಳು –**

ಕುದುರೆಗಳಲ್ಲಿ ಹುಟ್ಟಿರುವ ಚಿಹ್ನೆಯು ಚಿಕ್ಕದಾಗಿ ಗೋಚರಿಸುತ್ತಿದ್ದರೆ ಹಾಗೂ ಪಕ್ಷಿಗಳಂತೆ ಎದ್ದು-ಬಿದ್ದು ಮಾಡುವ (ಏಳುವ-ಬೀಳುವ ಕ್ರಿಯೆಯುಳ್ಳ) ಕುದುರೆಗಳನ್ನು ಬಾಲ್ಯಾವಸ್ಥೆಯ ಕುದುರೆಗಳೆಂದು ತಿಳಿಯಬೇಕು. ಸ್ಥಿರವಾದ, ಬಿಳುಪಾದ, ಒತ್ತಾದ, ಚೂಪಾದ ಹಲ್ಲುಗಳುಳ್ಳ ಕುದುರೆಯನ್ನು 'ಸಾರದಂತ' ಎನ್ನುತ್ತಾರೆ. ಕಾಲಕ್ರಮದಲ್ಲಿ ಈ ಹಲ್ಲುಗಳು ನಾಶವಾಗುತ್ತವೆ. ಕುದುರೆಯ ಪಾಲಕನ ಆಶ್ರಯದಲ್ಲಿರುವ ಸಂಚರಿಸುವ ಕುದುರೆಯ ವಯಸ್ಸು ಮೂರು ವರ್ಷಗಳೆಂದು ಗೊತ್ತಾಗಿದೆ. ಹಲ್ಲುಗಳ ಸಂಖ್ಯಾಕ್ರಮದಲ್ಲಿ ಇವುಗಳ ವಯಸ್ಸನ್ನು ಪರಿಗಣಿಸಬೇಕು.

ಚಾರಖ್ಯಾವೆಂಬ ಕುದುರೆಗಳನ್ನೇ ಸಾರದಂತ ಕುದುರೆಗಳೆಂದು ಹೇಳಲ್ಪಟ್ಟಿದೆ. ನಾಲ್ಕನೆಯ ವರ್ಷಕ್ಕೆ ಕಪ್ಪು ಮೈಬಣ್ಣ ಹೊಂದಿದ್ದರೆ ಕಾಲಿಕಾಕುದುರೆ ಎಂದು ತಿಳಿಯಬೇಕು. ಏಳನೆಯ ವಯಸ್ಸಿನದು ಹರಿಣೀ ಎಂಬ ಕುದುರೆ. ಅವುಗಳ ಕೋರೆಹಲ್ಲುಗಳನ್ನು ಆಶ್ರಯಿಸಿ ವಯಸ್ಸನ್ನು ಪರಿಗಣಿಸಲಾಗುತ್ತದೆ.

**ಆಯುಸ್ಸಿನ ತತ್ತ್ವ –**

ಯಾವ ರೀತಿಯಾಗಿ ಮನುಷ್ಯರಿಗೆ 100 ವರ್ಷ, ಆನೆಗಳಿಗೆ 120 ವರ್ಷ, ಹಸುಗಳಿಗೆ 24 ವರ್ಷ, ಕತ್ತೆ ಹಾಗೂ ಒಂಟೆಗಳಿಗೆ 25 ವರ್ಷ, ನಾಯಿಗಳಿಗೆ 16 ವರ್ಷ, ನರಿಗಳಿಗೆ 25 ವರ್ಷ, ಕ್ರಿಮಿಗಳಿಗೆ 7 ದಿನ ಹಾಗೂ ನೊಣಗಳಿಗೆ 14 ದಿನಗಳು ಆಯುಃಪ್ರಮಾಣವೆಂದು ನಿಗದಿತವಾಗಿದೆಯೋ ಅದೇ ರೀತಿಯಾಗಿ ಕುದುರೆಗಳಿಗೆ 32 ವರ್ಷ ಆಯುಷ್ಯವೆಂದು ಶಾಲಿಹೋತ್ರಮುನಿಯಿಂದ ಹೇಳಲ್ಪಟ್ಟಿದೆ.

## 7. ಆವರ್ತಾಧ್ಯಾಯ

**ಆವರ್ತ ಲಕ್ಷಣ –**

ಯಾವ ರೀತಿಯಾಗಿ ಭೂಮಿಯಲ್ಲಿ ವೇಗವಾಗಿ ಸಂಚರಿಸುವ ಗಾಳಿಯಿಂದ ಗರಿಕೆಗಳನ್ನು ವೃತ್ತಾಕಾರವಾಗಿ ಸುತ್ತುವಂತೆ ಮಾಡುತ್ತದೆಯೋ (ಸುಳಿಯಾಕಾರವಾಗಿ ಮಾಡುತ್ತವೆಯೋ) ಅದೇ ರೀತಿಯಾಗಿ ವೃತ್ತಾಕಾರದಲ್ಲಿ ಸುಳಿಗಳು ಕುದುರೆಯ ಶರೀರದಲ್ಲಿ ಉತ್ಪತ್ತಿಯಾಗುತ್ತವೆ.

ಸುಳಿಗಳಲ್ಲಿ ಆವರ್ತ (ವೃತ್ತಾಕಾರ), ಶುಕ್ತಿ, ಸಂಘಾತ, ಮುಕುಲ, ಅವಲೀಢ, ಶತಪಾದಿ, ಪಾದುಕಾರ್ಧ ಹಾಗೂ ಪಾದುಕಾ ಎಂಬುದಾಗಿ ಎಂಟು ಬಗೆಯ ಸುಳಿಗಳು ಉತ್ತಮವಾಗಿ ನಿರೂಪಿತವಾಗಿವೆ. ಅವುಗಳ ಸ್ವರೂಪ ವಿಶೇಷಣಗಳನ್ನು ಮುಂದೆ ಹೇಳಲಾಗಿದೆ. ಅವುಗಳಲ್ಲಿ ಪ್ರಧಾನವಾದುದು ಹಾಗೂ ಮಂಗಳಕರವಾದುದು ಶುಕ್ತಿರೂಪದ ಆವರ್ತ. ಹಾಗೆಯೇ ಶತಪಾದಿ, ಪಾದುಕಾರ್ಧ ಆವರ್ತಗಳೂ ಕೂಡ. ಶುಕ್ತಿರೂಪ ಸುಳಿಯು ಆರು ಅಂಗುಲವುಳ್ಳದ್ದು, ಪಾದುಕಾ

ಮತ್ತು ಮುಕುಲ ಎಂಬ ಸುಳಿಗಳು ಎರಡು ಅಂಗುಲವಿರುತ್ತದೆ. ಪ್ರಮಾಣಗಳ ಹಾಗೂ ಅಂಗುಲಗಳ ವಿಭಾಗದ ಮೇಲೆ ಆವರ್ತಗಳನ್ನು ತಿಳಿಯಬೇಕು.

ಭವನ (ಕಟ್ಟಡ), ತಾವರೆ, ಚಕ್ರ, ತೋರಣ, ಧನುಸ್ಸು, ಖಡ್ಗ ಮತ್ತು ಶಂಖದಂತಿರುವ ಸುಳಿಗಳು, ಮೆಟ್ಟಿಲಿನೋಪಾದಿಯ ಸುಳಿಗಳು, ಚತುರ್ಭುಜಾಕೃತಿ ಅಥವಾ ಚೌಕಾಕಾರದ ರೀತಿಯಲ್ಲಿರುವ ಸುಳಿಗಳು, ಚಂದ್ರ, ತ್ರೇತಾಗ್ನಿ (ಅಶ್ವದ ಹಣೆಯಲ್ಲಿ ಪ್ರದಕ್ಷಿಣಾಕಾರವಾದ ಕೂದಲುಗಳಿಂದ ಕೂಡಿದ ಮೂರು ಆವರ್ತಗಳು), ಖರ್ಜೂರ, ಅಂಕುಶ, ಚಾಮರ, ಧ್ವಜ, ರಥಾಂಗ, ಅರಳಿ ಎಲೆಯ ರೂಪ, ವೇದಿಕಾ, ಸ್ವಸ್ತಿಕಾ ಚಿಹ್ನೆ, ಮೀನು, ಪೂರ್ಣಕಲಶ, ಬಿಲ್ವಪತ್ರ, ಮಾಲೆ ಮೇಲೆ ಹೇಳಿದ ಇವುಗಳಿಗೆ ಸದೃಶವಾಗಿರುವ (ಆಕಾರದಲ್ಲಿ) ಆವರ್ತಗಳು, ಅಂತೆಯೇ ಮೊರ, ಅಷ್ಟಪದಿ, ವಜ್ರ, ನೇಗಿಲು, ಗದೆ, ಅರ್ಧಚಂದ್ರ, ಯಜ್ಞಸ್ತಂಭ, ಅಪಾನಪ್ರದೇಶ, ಛತ್ರಿ, ಕನ್ನೈದಿಲೆ, ಈ ಅನೇಕ ಆವರ್ತಗಳು ಶ್ರೇಷ್ಠವಾದವುಗಳು.

ಕುದುರೆಗಳಲ್ಲಿರುವ ಸುಳಿಗಳು ಮೂರು ಬಗೆಯಾದವುಗಳು. ಅವು – 1. ಸ್ಥಿರವಾದುದು, 2. ನಿಂದ್ಯವಾದವುಗಳು ಹಾಗೂ 3. ಶುಭವಾದುದು.

ಅವುಗಳಲ್ಲಿ ಧ್ರುವ (ಸ್ಥಿರ)ವಾದವುಗಳು ಹತ್ತು ಬಗೆ. ಹಾಗೆಯೇ ಅವುಗಳಿರುವ ಜಾಗವು ಹತ್ತು ಬಗೆಯಾಗಿರುತ್ತದೆ. ಎದೆಯಲ್ಲಿ ಎರಡು, ತಲೆಯಲ್ಲಿ ಎರಡು, ಹಾಗೆಯೇ ರಂಧ್ರೋಪರಂಧ್ರಗಳಲ್ಲಿ ಎರಡೆರಡು, ಒಂದು ಹಣೆಯ ಮಧ್ಯದಲ್ಲಿ ಮತ್ತು ಅಪಾನಪ್ರದೇಶದಲ್ಲಿ ಒಂದು. ಈ ಎಂಟು ಸ್ವಸ್ಥಾನದಲ್ಲಿ ಪ್ರದಕ್ಷಿಣಾ ರೀತಿಯಲ್ಲಿರುವ ಸುಳಿಗಳು ಒಳ್ಳೆಯ ಕಾಂತಿಯಿಂದ ಶುಭಪ್ರದವಾಗಿ ಮತ್ತು ಮಂಗಳಕರವಾದವುಗಳಾಗಿವೆ. ಈ ರೀತಿ ಸುಳಿ ಇಲ್ಲದಿರುವ ಕುದುರೆಗಳು ಅಲ್ಪಾಯುಷ್ಯ ಹಾಗೂ ದುಷ್ಟಲಕ್ಷಣವುಳ್ಳದ್ದು ಮತ್ತು ಪಾಪಲಕ್ಷಣಗಳಿಂದ ಅಶುಭವೆಂದು ಪರಿಗಣಿಸಲ್ಪಟ್ಟಿವೆ. ಸ್ಥಾನಭ್ರಷ್ಟವಾದ ಸುಳಿಗಳು (ಯಾವ ಜಾಗದಲ್ಲಿ

ಇರಬೇಕೋ ಆ ಜಾಗದಲ್ಲಿ ಇರದ ಸುಳಿಗಳು), ಛಿದ್ರವಾಗಿದ್ದರೆ ಅಂದರೆ ಸಂಪೂರ್ಣವಾಗಿಲ್ಲದಿದ್ದರೆ ಅಂತಹವುಗಳು ಪ್ರಶಸ್ತವಾದುದಲ್ಲ.

**ಅಮಂಗಳಕರ ಸುಳಿಗಳ ಫಲಗಳು –**

ಅಶುಭವಾದ ಫಲಗಳನ್ನು ಕೊಡತಕ್ಕ ಕುದುರೆಗಳ ವಿಷಯವನ್ನು ಹೇಳುತ್ತೇನೆ. ಕುದುರೆಯ ಕಟಬಾಯಲ್ಲಿ ಸುಳಿಗಳಿದ್ದರೆ ಅದು ಒಡೆಯನಿಗೆ ಅಮಂಗಳವನ್ನು ಉಂಟುಮಾಡುತ್ತದೆ ಹಾಗೂ ಅವನ ವಂಶವನ್ನು ನಾಶಮಾಡುತ್ತದೆ. ಹಣೆಯ ಮಧ್ಯಭಾಗದಲ್ಲಿ ಕೂದಲುಗಳಿಂದ ಕೂಡಿದ ಸುಳಿಗಳಿಂದ ಒಡೆಯನ ಸಂಪೂರ್ಣ ಕುಲನಾಶವಾಗುತ್ತದೆ.

ಎರಡು ಸುಳಿಗಳು ಕುದುರೆಯ ಹೆಗಲಿನ ಮೇಲಿದ್ದರೆ ಒಡೆಯನಿಗೆ ಭಯವನ್ನು, ಹುಬ್ಬುಗಳ ಮಧ್ಯಭಾಗದಲ್ಲಿದ್ದರೆ ಸಂಪತ್ತಿನ ನಾಶವನ್ನೂ, ಕಿವಿಗಳ ಕೆಳಭಾಗದಲ್ಲಿದ್ದರೆ ಎಲ್ಲ ರೀತಿಯಿಂದಲೂ ಅನರ್ಥವನ್ನುಂಟುಮಾಡುತ್ತವೆ.

ಕುದುರೆಯ ದವಡೆಯಲ್ಲಿ, ಕತ್ತಿನ ಹಿಂದೆ ಇರುವ ನರದಲ್ಲಿ (ಕೂರ್ಜ), ಹುಬ್ಬುಗಳ ಮಧ್ಯದಲ್ಲಿ, ಕಂಠದಲ್ಲಿ, ಹೆಗಲಿನಲ್ಲಿ, ತೊಡೆಗಳಲ್ಲಿ, ಹೊಟ್ಟೆಯಲ್ಲಿ ಸುಳಿಗಳಿದ್ದರೆ ಆ ಕುದುರೆಯ ಒಡೆಯನು ಮಾರ್ಗಮಧ್ಯದಲ್ಲಿ ಬಾಣಗಳ ಮಳೆಯಿಂದ ನಾಶವಾಗುತ್ತಾನೆ. ಸುಳಿಗಳು ದವಡೆಯಲ್ಲಿದ್ದರೆ ಸಂಪತ್ತಿನ ನಾಶ, ಕತ್ತಿನ ಹಿಂದೆ ಇರುವ ನರದಲ್ಲಿದ್ದರೆ ಸಾವು ಉಂಟಾಗುತ್ತವೆ. ಹೆಗಲ ಮೇಲಿದ್ದರೆ ಯಾವಾಗಲೂ ಒಡೆಯನ ಜೀವದ ನಾಶವುಂಟಾಗುತ್ತದೆ (ಒಡೆಯನಿಗೆ ಮೃತ್ಯುವುಂಟಾಗುತ್ತದೆ).

ಸುಳಿಗಳು ಕಣ್ಣುಗಳ ಕೆಳತುದಿಯಲ್ಲಿದ್ದರೆ ಒಡೆಯನಿಗೆ ಅಧಿಕವಾದ ಶೋಕ, ದುಃಖ, ಭಯವುಂಟಾಗುತ್ತದೆ. ಕೂದಲುಗಳಿಂದ ಉಂಟಾದ ಸುಳಿಗಳು ನಿತಂಬ

ಹಾಗೂ ಪಿಂಡಾಂಡದಲ್ಲಿದ್ದರೆ ಒಡೆಯನ ಕುಲನಾಶವಾಗುತ್ತದೆ. ಸುಳಿಗಳು ಕಂಠದ ಮಧ್ಯಭಾಗದಲ್ಲಿದ್ದರೆ ಗಲಗಂಡ, ಹಸಿವು, ದುಃಖ ಹಾಗೂ ಸಾವನ್ನು ಉಂಟುಮಾಡುತ್ತದೆ. ಕೂದಲಿನಿಂದ ಕೂಡಿದ ಸುಳಿಗಳು ಮಂಡಿಯಲ್ಲಿದ್ದರೆ ಒಡೆಯನ ಬಂಧನ, ದುಃಖ, ರೋಗಭಯ ಮುಂತಾದವುಗಳನ್ನು ಉಂಟುಮಾಡುತ್ತವೆ.

ಸುಳಿಗಳು ಮೇಲುತುಟಿಯಲ್ಲಿದ್ದರೆ ಆಗ ಅದು ಒಡೆಯನ ಸಹೋದರರನ್ನು ನಾಶಮಾಡುತ್ತದೆ. ಸುಳಿಗಳು ಮೂಗಿನ ಹೊಳ್ಳೆಗಳಲ್ಲಿದ್ದರೆ ಒಡೆಯನ ವಂಶದವರನ್ನೆಲ್ಲಾ ಅತಿಶೀಘ್ರವಾಗಿ ನಾಶಮಾಡುತ್ತದೆ. ಸುಳಿಗಳು ಕಂಕುಳಿನಲ್ಲಿದ್ದರೆ ಒಡೆಯನನ್ನು ಹಾಗೂ ಅವನ ಪರಿವಾರವನ್ನು ಅತಿಶೀಘ್ರವಾಗಿ ಬಾಣಗಳ ಸಮೂಹದಿಂದ ಕೊಲ್ಲುತ್ತದೆ. ಮೂಗಿನಲ್ಲಿರುವ ಸುಳಿಗಳು ಒಡೆಯನಿಗೆ ಕೊಳೆಯನ್ನು, ಬುದ್ಧಿಭ್ರಮಣೆಯನ್ನು ಹಾಗೂ ಅತಿಶೀಘ್ರವಾಗಿ ಸಾವನ್ನು ಉಂಟುಮಾಡುತ್ತದೆ. ಕುದುರೆಯ ಗಂಡಸ್ಥಳಗಳಲ್ಲಿನ ಸುಳಿಗಳು ಭಯವನ್ನುಂಟುಮಾಡುತ್ತವೆ ಹಾಗೂ ತನ್ನ ಸ್ವಾಮಿಗೆ ಮೃತುವಿನ ದೂತನಾಗಿ ಬರುತ್ತದೆ. ಮಂಡಿಗಳಲ್ಲಿರುವ ಸುಳಿಗಳು ತನ್ನ ಸ್ವಾಮಿಗೆ ಅತ್ಯಂತ ದುಃಖವನ್ನುಂಟುಮಾಡುತ್ತವೆ ಹಾಗೂ ತನ್ನ ಸ್ವಾಮಿಯನ್ನು ವಂಶಸಮೇತವಾಗಿ ನಾಶಮಾಡುತ್ತದೆ ಮತ್ತು ಕಳ್ಳರಿಂದ, ಶಸ್ತ್ರದಿಂದ, ಬೆಂಕಿಯಿಂದ, ವಿಷದಿಂದ ಭಯವನ್ನುಂಟುಮಾಡುತ್ತದೆ ಹಾಗೂ ಒಡೆಯನು ತನ್ನ ಮನೆಗೆ ಪ್ರವೇಶಿಸಲಾಗದೆ ಬಹಳ ಬೇಗ ರಾಜ್ಯವನ್ನು ಕಳೆದುಕೊಳ್ಳುತ್ತಾನೆ. ಇಂತಹ ಸುಳಿಗಳಿರುವ ಕುದುರೆಯು ಅತ್ಯಂತ ದೋಷಯುಕ್ತವಾದುದು.

ಸುಳಿಗಳು ಹೆಗಲ ಮೇಲಿರುವ ಹಿಣಲಿನಲ್ಲಿದ್ದರೆ ಅಂತಹ ಕುದುರೆಗಳು ಅತ್ಯಂತ ದೋಷಯುಕ್ತವಾದುದು ಮತ್ತು ರಾಜನ ಸಂಪತ್ತನ್ನು, ರಾಜ್ಯವನ್ನು

ಮತ್ತು ಆತನ ವಂಶವನ್ನು ನಾಶಮಾಡುತ್ತವೆ. ಆದುದರಿಂದ ಅಂತಹ ಕುದುರೆಯನ್ನು ರಾಜನು ನೋಡಬಾರದು, ಮುಟ್ಟಬಾರದು. ತತ್‌ಕ್ಷಣವೇ ದೇವಸ್ಥಾನಕ್ಕೋ ಅಥವಾ ಬೇರೆಯವರಿಗೋ ದಾನಮಾಡಬೇಕು. ಅಂತಹ ಕುದುರೆಗಳು ಹುಟ್ಟಿದ ತತ್‌ಕ್ಷಣವೇ ಬೇರೆ ರಾಜ್ಯದ ಮಧ್ಯದಲ್ಲಿ ಬಿಟ್ಟು ಬರಬೇಕು.

ಕಾಕಸಸ್ಥಾನದಲ್ಲಿ ಕೂದಲಿನಿಂದ ಆವೃತವಾದ ಸುಳಿಗಳಿದ್ದರೆ ಅಂತಹ ಕುದುರೆ ಮತ್ತು ಅದರ ಸ್ವಾಮಿಯು ಯುದ್ಧದಲ್ಲಿ ಸಾಯುತ್ತಾರೆ. ಆಕ್ರೋಶದಿಂದ ವಿಕಾರವಾಗಿ ಜೋರಾಗಿ ಕೂಗುತ್ತಿರುವ ನೂರಾರು ಕಾಗೆಗಳಿಂದ ತಿನ್ನಲ್ಪಡುತ್ತಾರೆ.

ಶರೀರದ ಅಕ್ಕಪಕ್ಕಗಳಲ್ಲಿ ಕೂದಲಿನಿಂದ ಕೂಡಿದ ಸುಳಿಗಳಿದ್ದರೆ ಅಂತಹ ಕುದುರೆಯ ಸ್ವಾಮಿಯು ಬೇಸಿಗೆಯ ಸೂರ್ಯನ ಕಿರಣಗಳ ತಾಪಕ್ಕೆ ನೆಲದ ಮೇಲೆ ಬಿದ್ದ ನೀರಿನ ಹನಿ ಹೇಗೆ ನಾಶವಾಗುತ್ತದೆಯೋ ಹಾಗೆ ನಾಶವನ್ನು ಹೊಂದುತ್ತಾನೆ.

ಎದೆಯಲ್ಲಿ ಸುಳಿಯಿದ್ದರೆ ಅಂತಹ ಕುದುರೆಯ ಸ್ವಾಮಿಯು ಅತಿಶೀಘ್ರವಾಗಿ ಕೊಲ್ಲಲ್ಪಡುತ್ತಾನೆ ಹಾಗೂ ರಾಜನ ವಂಶದವರು ಮಾರ್ಗಮಧ್ಯದಲ್ಲಿ ಅಥವಾ ಯುದ್ಧದಲ್ಲಿ ಹತರಾಗುತ್ತಾರೆ.

ಕಿವಿಗಳಲ್ಲಿ ಸುಳಿಗಳಿದ್ದರೆ ಒಡೆಯನ ಕಿವಿಗಳು ಕತ್ತರಿಸಲ್ಪಡುತ್ತದೆ. ಸುಳಿಗಳು ಕಿವಿಯ ಮೂಲದಲ್ಲೋ ಅಥವಾ ಮಧ್ಯದಲ್ಲೋ ಇದ್ದರೆ ಒಡೆಯನು ಕೊಲ್ಲಲ್ಪಡುತ್ತಾನೆ.

ಸುಳಿಗಳು ಮೂಗಿನ ಹೊಳ್ಳೆಯಲ್ಲಿದ್ದರೆ ಒಡೆಯನ ಹಣವು ಶೀಘ್ರವಾಗಿ ನಾಶವಾಗುತ್ತದೆ. ಸುಳಿಗಳು ಹೃದಯದಲ್ಲಿದ್ದರೆ (ಎದೆಯಲ್ಲಿದ್ದರೆ) ಒಡೆಯನಿಗೆ ಹೃದಯದ ಕಾಯಿಲೆ, ಬಂಧನ ಮತ್ತು ಮರಣವುಂಟಾಗುತ್ತದೆ.

ಬಾಯಿಯ ಮೇಲ್ಭಾಗದಲ್ಲಿ ಪ್ರದಕ್ಷಿಣಾಕಾರದ ಕೂದಲಿನಿಂದ ಕೂಡಿದ ಸುಳಿಗಳಿದ್ದರೆ ಅಂತಹ ಕುದುರೆಯ ಒಡೆಯನ ತಂದೆ ಹಾಗೂ ಸಹೋದರರು ನಿಶ್ಚಯವಾಗಿ ಕೊಲ್ಲಲ್ಪಡುತ್ತಾರೆ.

ಸುಳಿಗಳು ಸೀವನಿ, ಹೊಟ್ಟೆ ಅಥವಾ ಅಪಾನದೇಶದಲ್ಲಿದ್ದರೆ ಅಂತಹ ಕುದುರೆಯ ಒಡೆಯನಿಗೆ ಹೊಟ್ಟೆಗೆ ಸಂಬಂಧಿಸಿದ ಕಾಯಿಲೆ ಹಾಗೂ ದುಃಖವುಂಟಾಗುತ್ತದೆ ಎಂದು ಹೇಳಲ್ಪಟ್ಟಿದೆ.

ಸುಳಿಗಳು ಬಾಲದ ಮೂಲದಲ್ಲಿ ಹುಟ್ಟಿದ್ದರೆ ಅಂತಹ ಕುದುರೆಯ ಒಡೆಯನು ಬಾಣಗಳಿಂದ ಪ್ರಾಣವನ್ನು ಕಳೆದುಕೊಳ್ಳುತ್ತಾನೆ. ಮೂತ್ರಕೋಶದಲ್ಲಿ ಸುಳಿಗಳಿದ್ದರೆ ಒಡೆಯನ ಹಲ್ಲುಗಳು ನಾಶವಾಗುತ್ತವೆ. ಸುಳಿಗಳು ಅಂಡಕೋಶದಲ್ಲಿದ್ದರೆ ನಿಶ್ಚಯವಾಗಿಯೂ ಸ್ವಾಮಿಯ ಹಿರಿಯಮಗನು ಕೊಲ್ಲಲ್ಪಡುತ್ತಾನೆ. ಹೊಕ್ಕಳಲ್ಲಿ ಸುಳಿಗಳಿದ್ದರೆ ಅಂತಹ ಕುದುರೆಯ ಒಡೆಯನು ಬಹಳಕಾಲ ಮಕ್ಕಳೊಡಗೂಡಿ ಜಲೋದರ ಮುಂತಾದ ಕಾಯಿಲೆಗಳಿಂದ ಬಾಧಿತನಾಗುವುದರಲ್ಲಿ ಸಂಶಯವಿಲ್ಲ.

ಸುಳಿಗಳು ಬೆನ್ನೆಲುಬಿನ ಕೆಳಭಾಗದಲ್ಲಿದ್ದರೆ ಅಂತಹ ಕುದುರೆ ತನ್ನ ಸ್ವಾಮಿಯ ಜೊತೆಗೂಡಿ ಯುದ್ಧದಲ್ಲಿ ಪ್ರಾಣವನ್ನು ಕಳೆದುಕೊಳ್ಳುತ್ತದೆ. ಗೊರಸಿನಲ್ಲಿ ಸುಳಿಗಳಿದ್ದರೆ ಒಡೆಯನ ಜೊತೆಯಲ್ಲಿಯೇ ಕುದುರೆಯು ಕೊಲ್ಲಲ್ಪಡುತ್ತದೆ.

ಕುಷ್ಠಿಕಾ ಸ್ಥಾನದಲ್ಲಿ ಸುಳಿಗಳು ಕಂಡುಬಂದರೆ ಆ ರೀತಿಯ ಕುದುರೆಯ ಒಡೆಯನು ದಾರುಣವಾದ ಕಷ್ಟಗಳಿಂದ ಯಾವಾಗಲೂ ಬಾಧಿಸಲ್ಪಡುತ್ತಾನೆ.

ಕುದುರೆಯ ಶರೀರದಲ್ಲಿರುವ ಎಂಟು ಪ್ರಸಿದ್ಧವಾದ ಸುಳಿಗಳು ಶುಭಾಶುಭ ಫಲಗಳನ್ನು ತಿಳಿಸುತ್ತವೆ. ಅವುಗಳಾವುವೆಂದರೆ ಶತಪಾದಿ, ಮುಕುಲ, ಆವರ್ತ, ಸಂಘಾತ, ಪಾದುಕಾ, ಅರ್ಧಪಾದುಕಾ, ಶುಕ್ತಿ ಮತ್ತು ಅವಲೀಢ.

ಲಕ್ಷ್ಮೀಚೇಳಿನ (ಸಾವಿರಕಾಲಿನ) ಆಕಾರದಲ್ಲಿರುವ ಸುಳಿಗೆ 'ಶತಪಾದಿ' ಎಂದು ಕರೆಯಲ್ಪಟ್ಟಿದೆ. ಜಾಜಿಹೂವಿನ ಆಕಾರದಲ್ಲಿರುವ ಸುಳಿಯನ್ನು 'ಮುಕುಲ' ಎಂದೂ, ಬಾಲದಲ್ಲಿ ಕೂದಲುಗಳ ಗುಂಪು ಸುಳಿಯಾಕಾರವಾಗಿ ಸುತ್ತಿದ್ದರೆ ಅದನ್ನು 'ಸಂಘಾತ' ಎಂದೂ. ಶಂಖದ ಆಕಾರದಲ್ಲಿರುವ ಸುಳಿಯನ್ನು 'ಶುಕ್ತಿ' ಎಂದೂ, ಸುಳಿಗಳು ಗುಂಪುಗುಂಪಾಗಿದ್ದರೆ 'ಅವಲೀಢ' ಎಂದೂ, ಕಾಲಿನಾಕಾರ-ದಲ್ಲಿದ್ದರೆ 'ಪಾದುಕಾ' ಎಂದೂ, ಅರ್ಧಕಾಲಿನಾಕಾರದಲ್ಲಿದ್ದರೆ 'ಅರ್ಧಪಾದುಕಾ' ಎಂದೂ, ತಪೋಧನರಾದ ಋಷಿಗಳಿಂದ ತಿಳಿಸಿರುವಂತೆ ಅಶ್ವಶಾಸ್ತ್ರಕ್ಕನುಸಾರವಾಗಿ ಅಶ್ವಚಿಕಿತ್ಸಕನು ಕೂದಲ ಸಮೂಹದ ಆಕಾರದಿಂದ ಸುಳಿಗಳನ್ನು ಗುರುತಿಸಬೇಕು. ಕುದುರೆಯ ಲಕ್ಷಣಗಳನ್ನು ತಿಳಿದಂತಹ ಬುದ್ಧಿವಂತರು ಈ ಎಲ್ಲಾ ಸುಳಿಗಳು ಕೂದಲಿನಿಂದ ಉಂಟಾಗುವಂತಹದ್ದು ಎಂದು ತಿಳಿಸಿದ್ದಾರೆ.

ಸುಳಿಗಳು ಎರಡು ವಿಧ. ಮಂಗಳಕರವಾದ ಸುಳಿಗಳು (ಶುಭಫಲಗಳನ್ನು ಕೊಡತಕ್ಕ ಸುಳಿಗಳು) ಮತ್ತು ಅಮಂಗಳಕರವಾದ ಸುಳಿಗಳು (ಅಶುಭಫಲಗಳನ್ನು ಕೊಡತಕ್ಕ ಸುಳಿಗಳು). ಮಂಗಳಕರವಾದ ಹಾಗೂ ಅಮಂಗಳಕರವಾದ ಎರಡು ಸುಳಿಗಳು ಒಟ್ಟಾಗಿದ್ದರೆ ಅದರಲ್ಲಿ ಒಂದು ನಿಷ್ಫಲವಾಗುತ್ತದೆ. ಕೆಟ್ಟ ಸುಳಿಗಳನ್ನು ಚಿನ್ನದಿಂದ ಸುಟ್ಟರೆ ಆ ಸುಳಿಯಿಂದ ಉಂಟಾಗುವ ದೋಷವು ಪರಿಹಾರ-ವಾಗುತ್ತದೆ. ಹೊಳೆಯುತ್ತಿರುವ ರೋಮಜಾತ ಸುಳಿಗಳು ಶ್ರೀವೃಕ್ಷ (ಬಿಲ್ವಾಕಾರದ) ಸುಳಿಗಳು ಅಂಗದೀ ಮತ್ತು ಮೇಖಲೀ ಸುಳಿಗಳು. ಯಾವಾಗಲೂ ರಾಜ್ಯವನ್ನು ಮತ್ತು ರತ್ನವನ್ನು ಕೊಡುತ್ತದೆ.

ಕುದುರೆಯ ಮೂಗಿನಲ್ಲಿ ವಾಯುದೇವತೆಯು, ಹಣೆಯಲ್ಲಿ ಅಗ್ನಿಯು, ಎದೆಯಲ್ಲಿ ಅಶ್ವಿನೀದೇವತೆಗಳು, ತಲೆಯಲ್ಲಿ ಸೂರ್ಯ-ಚಂದ್ರರು, ರಂಧ್ರದಲ್ಲಿ ಸ್ಕಂದ-ವಿಶಾಖದೇವತೆಗಳು, ಉಪರಂಧ್ರಗಳಲ್ಲಿ ಹರಿಹರರು ಈ ರೀತಿಯಾಗಿ

ಈ ಸ್ಥಳದಲ್ಲಿರುವ ಹತ್ತು ಸುಳಿಗಳು ಪೂಜಿತವಾದವು ಹಾಗೂ ಶುಭ-ಫಲಪ್ರದವಾದವು. ಇದರಲ್ಲಿ ಒಂದು ಸುಳಿ ಇಲ್ಲದಿದ್ದರೂ ಅಶುಭಫಲವನ್ನು ಕೊಡುತ್ತದೆ.

## 8. ಮಿಶ್ರಿತಲಕ್ಷಣ

ಇಲ್ಲಿಯವರೆವಿಗೂ ಕುದುರೆಗಳ ಸಕಲ ಅಂಗಾಂಗಗಳ ಲಕ್ಷಣವನ್ನು ಹೇಳಲಾಯಿತು. ಈಗ ಮಂದಮತಿಗಳಿಗಾಗಿ ಮಿಶ್ರಿತಲಕ್ಷಣಗಳನ್ನು ಹೇಳುತ್ತೇನೆ. ಬಿಳಿಯ ಬಣ್ಣವುಳ್ಳ, ಬಿಳಿಯ ಗೊರಸುಳ್ಳ, ಬಿಳಿಯ ಕಣ್ಣಿನಿಂದ ಕೂಡಿದ ಮುಖವುಳ್ಳ, ಬಿಳಿಯ ಅಂಡಕೋಶವುಳ್ಳ ಬಿಳಿಯ ಚರ್ಮದಿಂದ ಕೂಡಿದ, ಬಿಳಿಯ ಕೂದಲುಳ್ಳ, ಬಿಳಿಯ ಗುದವುಳ್ಳ, ಸಿಂಹದಂತಹ ಸ್ವರವುಳ್ಳ ಅಥವಾ ಶಂಖನಾದದಂತಿರುವ ಸ್ವರವುಳ್ಳ ಎಲ್ಲ ರೀತಿಯ ಆಹಾರವನ್ನು ಇಷ್ಟಪಡುವ ಶುಭಪ್ರದವಾದ ಗಮನವುಳ್ಳ, ಸದೃಢನಿಲುವುಳ್ಳ ಕಾಂತಿಯುಕ್ತವಾದ ಮತ್ತು ಮಂಗಳಕರವಾದ ಸುಳಿಗಳಿಂದ ಕೂಡಿದ ಕುದುರೆಯು ಯಾವ ರಾಜನಲ್ಲಿರುತ್ತದೋ ಅಂತಹ ರಾಜನ ರಾಜ್ಯದಲ್ಲಿ ಜನರು ವಾಸಿಸಬೇಕು.

ಮೇಲೆ ಹೇಳಿದ ಲಕ್ಷಣಗಳಿಂದ ಕೂಡಿದ ಕುದುರೆಯನ್ನು ಹೊಂದಿರುವ ರಾಜನ ರಾಜ್ಯದಲ್ಲಿ ಶತ್ರುಸೈನ್ಯವು ಹತಶೇಷವಾಗುವುದು ಹಾಗೂ ಕೆಲವು ಶತ್ರುಗಳು ಭಯದಿಂದ ಓಡಿಹೋಗುವರು. ಧರ್ಮಾರ್ಥಕಾಮ ಹಾಗೂ ಸಂಪತ್ತನ್ನು ಹೊಂದಿ ಯುದ್ಧದಲ್ಲಿ ಆ ರಾಜನು ಜಯಗಳಿಸುತ್ತಾನೆ.

ರಾಜನು ತನ್ನ ಸಕಲ ಸಂಪತ್ತನ್ನು ದಾನ ಮಾಡಿಯಾದರೂ ಮೇಲೆ ಹೇಳಿದಂತಹ ಕುದುರೆಯನ್ನು ಪಡೆಯಬೇಕು. ಹಾಗೆ ಮಾಡುವುದರಿಂದ ಅತಿಶೀಘ್ರವಾಗಿ ಕಂಟಕಗಳು ನಾಶವಾಗಿ ರಾಜ್ಯವನ್ನು ಆಳುತ್ತಾನೆ. ಕುದುರೆಯ

ಜಠರವು ಬಿಳುಪಾಗಿದ್ದರೆ ಗಂಡುಮಕ್ಕಳನ್ನು, ಹೊಟ್ಟೆಯ ಬಿಳಿಯ ಬಣ್ಣದಿಂದ ಕೂಡಿದ್ದರೆ ಸಂತೋಷವನ್ನು, ಕುತ್ತಿಗೆಯು ಬಿಳುಪಾಗಿದ್ದರೆ ಹಣವನ್ನು, ಬೆನ್ನುಲುಬಿನ ಕೆಳಭಾಗ ಬಿಳುಪಾಗಿದ್ದರೆ ಸೌಭಾಗ್ಯವನ್ನು ಕೊಡುತ್ತದೆ. ಕುದುರೆಯ ಎಡಪಕ್ಕೆಯು (ಪಾರ್ಶ್ವ) ಬಿಳುಪಾಗಿದ್ದರೆ ಹಣವನ್ನು, ಬಲಪಕ್ಕೆಯು (ಪಾರ್ಶ್ವ) ಬಿಳುಪಾಗಿದ್ದರೆ ಹೆಂಡತಿಯನ್ನು, ಎದೆ ಬಿಳುಪಾಗಿದ್ದರೆ ಸೌಖ್ಯವನ್ನು, ಬೆನ್ನು ಮತ್ತು ಮುಖವು ಬಿಳುಪಾಗಿದ್ದರೆ ವಿಜಯವನ್ನು ತಂದುಕೊಡುತ್ತದೆ.

ಯಾವ ಕುದುರೆಯ ಕಿವಿಗಳು ಬಿಳುಪಾಗಿರುತ್ತದೋ, ಗೊರಸು ಹಾಗೂ ಪಾದಗಳು ಕೆಂಪು ಅಥವಾ ಕಪ್ಪು ಬಣ್ಣದ್ದಾಗಿರುತ್ತದೋ ಅಂತಹ ಕುದುರೆಯು ರಾಜನಿಗೆ ಎಲ್ಲ ಸುಖಗಳನ್ನೂ ಕೊಟ್ಟು, ಸೌಭಾಗ್ಯ ಹಾಗೂ ಐಶ್ವರ್ಯಗಳನ್ನು ನೀಡುತ್ತದೆ.

ಸ್ನಿಗ್ಧವಾದ ಕಡುಗೆಂಪುಬಣ್ಣದಿಂದ ಕೂಡಿದ ಕುದುರೆಯನ್ನು ಯಾವ ರಾಜನು ಹೊಂದುತ್ತಾನೋ ಅಂತಹ ರಾಜನು ಯುದ್ಧದಲ್ಲಿ ಜಯಶಾಲಿ-ಯಾಗುತ್ತಾನೆ. ಅಲ್ಲದೆ ಸುಖವನ್ನು ಹೊಂದುತ್ತಾನೆ ಹಾಗೂ ಅಧಿಕ ಸಂಪತ್ತನ್ನು ಹೊಂದುತ್ತಾನೆ.

ಚೆನ್ನಾಗಿ ಮಾಗಿದ ನೇರಳೆಹಣ್ಣಿನ ಬಣ್ಣದಂತಿರುವ ಮಂಗಳಕರವಾದ ಕುದುರೆಯನ್ನು ಯುದ್ಧಕಾಲದಲ್ಲಿ ಯಾವ ರಾಜನು ಏರುತ್ತಾನೋ ಅಂತಹ ರಾಜನಿಗೆ ಸದಾಕಾಲದಲ್ಲಿಯೂ ಸಕಲ ಭೂತಗಳು ನಿಶ್ಚಯವಾಗಿಯೂ ವಶವಾಗುತ್ತವೆ. ಬಿಳಿಯಬಣ್ಣದ ಎಂಟು ಕುದುರೆಗಳೂ ಹಾಗೂ ಕುದುರೆಯ ಎದೆ, ಬಾಲ, ತಲೆ, ಮುಖ, ಗೊರಸು ಈ ಭಾಗಗಳು ಬಿಳುಪಾಗಿದ್ದರೆ ಅಂತಹ ಕುದುರೆಗಳು ರಾಜನಿಗೆ ಎಂಟು ವಿಧವಾದ ಮಂಗಳವನ್ನು ಮತ್ತು ಹಿತವನ್ನು ಉಂಟುಮಾಡುತ್ತವೆ ಹಾಗೂ ರಾಜ್ಯವನ್ನು, ಸುಖವನ್ನು, ಯಶಸ್ಸನ್ನು ಕೊಡುತ್ತದೆ.

ನೀಲಿ, ಕೆಂಪು, ಬಿಳುಪು, ಹಳದಿ, ಕಪ್ಪು ಬಣ್ಣಗಳಿಂದ ಮಿಶ್ರಿತವಾದ ಕುದುರೆ ಅಥವಾ ಈ ಬಣ್ಣಗಳ ಸಮೂಹದಿಂದ ಇಡೀ ಶರೀರ ವಿಶೇಷರೀತಿಯಲ್ಲಿ ಅಲಂಕೃತವಾಗಿದ್ದರೆ ಅಂತಹ ಕುದುರೆಯು ಪ್ರಮುಖವಾದ ಕುದುರೆ ಎನಿಸುತ್ತದೆ ಹಾಗೂ ಒಡೆಯನಿಗೆ ಜಯವನ್ನು ತರುತ್ತದೆ.

ಮೇಲೆ ಹೇಳಿರುವ ಲಕ್ಷಣಗಳನ್ನು ಹೊಂದಿರುವ ಕುದುರೆಯು ಪುಣ್ಯಪ್ರದವಾದುದು ಹಾಗೂ ಸಾರ್ಥಕವೆನಿಸುವಂತಹದ್ದು ಅಂತಹ ಕುದುರೆಗಳು ರಾಜನಿಗೆ ಯಾವಾಗಲೂ ಕ್ಷೇಮವನ್ನು ಉಂಟುಮಾಡುತ್ತದೆ ಹಾಗೂ ಸಂಪತ್ತನ್ನು ಕೊಡುತ್ತವೆ ಹಾಗೂ ಯಾವ ಪ್ರದೇಶದಲ್ಲಿ ಈ ಕುದುರೆಗಳು ವಾಸಿಸುತ್ತವೋ ಅಲ್ಲಿ ಅಗ್ನಿಬಾಧೆಯಾಗಲೀ ಶಸ್ತ್ರಗಳ ಭಯವಾಗಲೀ ಉಂಟಾಗುವುದಿಲ್ಲ.

ಯಾವ ಕುದುರೆಯು ಮಧ್ಯಭಾಗದಲ್ಲಿ ದಟ್ಟವಾದ ಬಿಳಿಯ ಪಟ್ಟಿಯನ್ನು ಹೊಂದಿರುತ್ತದೋ ಅಂತಹ ಕುದುರೆಯು ಯುದ್ಧದಲ್ಲಿ ಶತ್ರುಗಳ ಸೈನ್ಯವನ್ನು ನಾಶಮಾಡುತ್ತದೆ ಹಾಗೂ ಅದನ್ನು 'ವಿಮರ್ದನ' ಎಂದು ಕರೆಯುತ್ತಾರೆ.

ಯಾವ ಕಪ್ಪು ಕುದುರೆಯು ಮಧ್ಯಭಾಗದಲ್ಲಿ ಕೆಂಪುಬಣ್ಣದ ಪಟ್ಟೆ ಹೊಂದಿರುತ್ತದೋ ಅಂತಹ ಕುದುರೆಯು ಸಹ ಹಿಂದೆ ಹೇಳಿದ ಫಲವನ್ನೇ ಕೊಡುತ್ತದೆ (ಶತ್ರುಗಳನ್ನು ನಾಶಮಾಡುತ್ತದೆ).

ಯಾವ ಕಪ್ಪು ಅಥವಾ ಕೆಂಪು ಬಣ್ಣದ ಕುದುರೆಯ ಹೊಟ್ಟೆ ಅಥವಾ ಎದೆ ಬಿಳಿ ಬಣ್ಣದ್ದಾಗಿರುತ್ತದೋ ಆ ಕುದುರೆಯು ವಿಜಯಶಾಲಿಯಾಗಿರುತ್ತದೆ. ಅದು ಮಂಗಳಕರವಾದ ಕುದುರೆಯಾಗಿದ್ದು ಎಲ್ಲ ಇಷ್ಟಾರ್ಥಸಿದ್ಧಿಯನ್ನೂ ತಂದುಕೊಡುತ್ತದೆ. ಅಂತಹ ಕುದುರೆ ಒಡೆಯನಿಗೆ ಹಿಂದೆ ಹೇಳಿದ ಫಲವನ್ನೇ ನೀಡುತ್ತದೆ. ಹೊಟ್ಟೆಯ ಬಣ್ಣ ಕಪ್ಪು ಅಥವಾ ಕೆಂಪು ಆಗಿದ್ದರೆ ಮತ್ತು ಎದೆ

ಕೆಂಪು ಬಣ್ಣವಾಗಿದ್ದರೆ ಅಂತಹ ಕುದುರೆಯ ಒಡೆಯನಿಗೆ ಹಿಂದೆ ಹೇಳಿದ ಫಲವನ್ನೇ ನೀಡುತ್ತದೆ.

ಸೊಂಟದ ಸುತ್ತ ಬಿಳಿಯ ಪಟ್ಟೆ ಇರುವ ಕುದುರೆಯು ಒಡೆಯನ ಶತ್ರುಗಳನ್ನು ನಾಶಮಾಡುತ್ತದೆ ಹಾಗೂ **'ಸಂವೀತೀ'** ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ.

ಬಿಳುಪಾದ ಮುಖ ಬೆನ್ನು ಬಾಲ ಇರುವ ಕುದುರೆಯನ್ನು **'ಅತಿಮಿತ್ರ ಘರ್ಷಣ'** ಎಂಬ ಹೆಸರಿನಿಂದ ಕರೆಯುತ್ತಾರೆ. ಇಂತಹ ಕುದುರೆಯು ರಾಜನ ಸೈನ್ಯದ ಮುಂದೆ ಇದ್ದರೆ ಆ ಸೇನೆಯು ವಿಜಯವನ್ನು ಹೊಂದುತ್ತದೆ.

ಕಣ್ಣುಗಳಿಂದ ಪ್ರಾರಂಭವಾಗಿ ಕಿವಿಗಳವರೆವಿಗೂ ಹಾಗೂ ತಲೆಯು ಯಾವ ಕುದುರೆಗೆ ಬಿಳುಪಾಗಿರುತ್ತದೋ ಅಂತಹ ಕುದುರೆಯು ಎಲ್ಲಾ ಇಷ್ಟಾರ್ಥಗಳನ್ನು ಪೂರೈಸುತ್ತದೆ. ಅದನ್ನು **'ಶಿರಪ್ರಾವೃತ'** ಎಂಬ ಹೆಸರಿನಿಂದ ಕರೆಯುತ್ತಾರೆ.

ಕುದುರೆ ಬಿಳುಪಾಗಿದ್ದು ಅದರ ತಲೆ ಮತ್ತಷ್ಟು ಬಿಳುಪಾಗಿದ್ದರೆ ಅಂತಹ ಕುದುರೆಯು ತನ್ನ ಸ್ವಾಮಿಗೆ ಸರ್ವಾರ್ಥ ಸಿದ್ಧಿಯನ್ನು ಉಂಟುಮಾಡುತ್ತದೆ ಹಾಗೂ ಅದನ್ನು **'ಸೂರ್ಯಕಾಂತ'** ಎನ್ನುತ್ತಾರೆ.

ಯಾವ ಕುದುರೆಯ ಚಿಕ್ಕ ಚಿಕ್ಕ ಸುಳಿಗಳು ಬೇರೆ ಬೇರೆ ಬಣ್ಣಗಳಿಂದ ಕೂಡಿ ಪ್ರತ್ಯೇಕವಾಗಿ ಕಾಣುತ್ತವೋ ಅಂತಹ ಕುದುರೆಯು ಶತ್ರುಗಳ ಸೈನ್ಯವನ್ನು ನಾಶಮಾಡುತ್ತದೆ ಹಾಗೂ **'ನಾಗಜಾತೀಯ'**ವೆಂದು ಕರೆಯುತ್ತಾರೆ.

ಯಾವ ಕುದುರೆ ಕಪ್ಪು ಅಥವಾ ಬಿಳಿಯ ಬಣ್ಣದಿಂದ ಕೂಡಿ ಚಿನ್ನದಂತೆ ಹೊಳೆಯುತ್ತದೆಯೋ ಮನೋಹರವಾದ ಹವಳದಂತೆ ಕೂದಲಿನ ಬಣ್ಣವನ್ನು ಹೊಂದಿರುತ್ತದೋ ಅಂತಹ ಕುದುರೆಯನ್ನು **'ಸ್ನಿಗ್ಧತುರಂಗ'** ಎಂದು ಕರೆಯುತ್ತಾರೆ. ಅದು ಸಂಪತ್ತನ್ನು ಕೊಡುತ್ತದೆ.

ಯಾವ ಕುದುರೆಯು ಕಪ್ಪಾಗಿದ್ದು ಬಿಳುಪಾದ ಎದೆ, ಮುಖ, ಗೊರಸು, ಬಾಲ, ಕಣ್ಣು, ಬೆನ್ನು ಇದ್ದರೆ ಅಂತಹ ಕುದುರೆಯನ್ನು **'ಜ್ಯೋತಿಷ್ಮ'** ಎಂದು ಕರೆಯುತ್ತಾರೆ. ಪುಣ್ಯಶಾಲಿಯಾದ ಆ ಕುದುರೆ ರತ್ನಗಳನ್ನು (ಸಂಪತ್ತು) ಹಾಗೂ ಇಡೀ ಭೂಮಂಡಲದ ಒಡೆತನವನ್ನು ಕೊಡುತ್ತದೆ.

ಕುದುರೆಯ ಗೊರಸು ಸುಳಿಗಳಿಂದ ಆವರಿಸಲ್ಪಟ್ಟಿದ್ದರೆ ಅಂತಹ ಕುದುರೆಯ ಒಡೆಯನು ಆಚಂದ್ರಾರ್ಕವಾದ ಕೀರ್ತಿ, ತತ್‌ಕ್ಷಣದಲ್ಲಿಯೇ ಸಂಪತ್ತು, ಮಕ್ಕಳು ಹಾಗೂ ಮೊಮ್ಮಕ್ಕಳನ್ನು ಹೊಂದುತ್ತಾನೆ.

ಕುದುರೆಯ ಗೊರಸು ತಲೆ, ಮುಖ ಬಿಳುಪಾಗಿದ್ದರೆ ಅಂತಹ ಕುದುರೆಯು **'ಪಂಚಭದ್ರಕ'** ಎಂದು ಕರೆಯುತ್ತಾರೆ. ಅದರ ಒಡೆಯನು ರಾಜನಾಗುತ್ತಾನೆ ಹಾಗೂ ರಾಜ್ಯದ ಸುಖವನ್ನು ಹೊಂದುತ್ತಾನೆ.

ಯಾವುದಾದರೊಂದು ಬಣ್ಣ ಕುದುರೆಯ ಮೈಮೇಲೆ ದಟ್ಟವಾಗಿ ಕಾಂತಿಯುಕ್ತವಾಗಿ ಸ್ಥಿರವಾಗಿ ಇದ್ದರೆ ಅಂತಹ ಕುದುರೆಯುಳ್ಳ ರಾಜನು ಅಧಿಕವಾದ ಸಂಪತ್ತನ್ನು ಹೊಂದುತ್ತಾನೆ. ಕುದುರೆಯ ಪೂರ್ವಾರ್ಧ ಶರೀರ (ತಲೆಯಿಂದ ಹೊಕ್ಕಳಿನವರೆಗೆ) ಬಾಲಸೂರ್ಯನ ಕಿರಣಗಳ ಬಣ್ಣದಿಂದ ಕೂಡಿದ (ಹೊಂಬಣ್ಣ) ಪಶ್ಚಿಮಾರ್ಧ ಶರೀರವು (ಹೊಕ್ಕಳಿನಿಂದ ಕೆಳಭಾಗದ ಶರೀರ) ಜಿಂಕೆಯ ಬಣ್ಣದಂತೆ ಇದ್ದರೆ ರಾಜನು ವಿಜಯಶಾಲಿಯಾಗುತ್ತಾನೆ. ಆ ಕುದುರೆಯು **'ದಿವಾವೈಜಯಕ'** ಎಂದು ತಿಳಿಯಲ್ಪಡುತ್ತದೆ.

ಕುದುರೆಯ ಪೂರ್ವಾರ್ಧಶರೀರವು ಚಂದ್ರನಂತೆ ಬಿಳುಪಾಗಿದ್ದು ಪಶ್ಚಿಮಾರ್ಧ ಶರೀರವು ಬಾಲಸೂರ್ಯನ ಕಿರಣಗಳ ಬಣ್ಣದಂತಿದ್ದರೆ ಹಾಗೂ ಕುದುರೆಯ ಶರೀರ ಬಲಯುತವಾಗಿ ಕಾಂತಿಯುತವಾಗಿ ಇದ್ದರೆ ಅಂತಹ ಕುದುರೆಯನ್ನು **'ನಿಶಾವೈಜಯಿಕ'** ಎಂದು ಕರೆಯುತ್ತಾರೆ. ಅಂತಹ ಕುದುರೆಯ ಒಡೆಯನಾದ

ರಾಜನ ವಂಶವು ಅಭಿವೃದ್ಧಿಯಾಗುತ್ತದೆ. ಅಂತಹ ಕುದುರೆಯು ರಾಜನಿಗೆ ಸೌಭಾಗ್ಯವನ್ನು ವಂಶಾಭಿವೃದ್ಧಿಯನ್ನು ಉಂಟುಮಾಡುತ್ತದೆ.

ಕಪ್ಪು ಬಣ್ಣದ ಕುದುರೆಯ ಅರ್ಧಶರೀರ ಯಾವಾಗಲೂ ಬಿಳುಪಾಗಿದ್ದರೆ ಅಂತಹ ಕುದುರೆಗಳು ಯೋಗ್ಯವಾದವುಗಳು ಮತ್ತು ಅವು ಶತ್ರುಗಳ ಸಂಪತ್ತನ್ನು ನಾಶಮಾಡುತ್ತವೆ ಹಾಗೂ ಯುದ್ಧದಲ್ಲಿ ಸ್ವಾಮಿಗೆ ಜಯವನ್ನುಂಟುಮಾಡುತ್ತವೆ.

ದುಷ್ಟವಾದ ಸುಳಿಗಳಿಂದ ಕೂಡಿದ್ದರೂ ಬಿಳುಪಾದ ಮುಖ ಹಾಗೂ ಕಾಲುಗಳಿದ್ದರೆ, ದುಂಬಿಯಂತೆ ಕಾಂತಿಯುಕ್ತವಾಗಿದ್ದರೆ, ಕಪ್ಪಾದ ಅಂಗಳು ಇದ್ದರೆ ಅಂತಹ ಕುದುರೆಯನ್ನು ದೋಷಯುಕ್ತವಾದ ಕುದುರೆಯೆಂದು ಪರಿಗಣಿಸುವುದಿಲ್ಲ.

ಕುದುರೆಯ ಶರೀರದಲ್ಲಿನ ಮೂರು ಭಾಗ ವಿಶಾಲವಾಗಿದ್ದು, ಮೂರು ಭಾಗ ಹಗುರವಾಗಿದ್ದರೆ, ಮೂರು ಭಾಗ ಮೃದುವಾಗಿದ್ದರೆ, ಮೂರು ಭಾಗ ದೊಡ್ಡದಾಗಿದ್ದರೆ, ಮೂರು ಭಾಗ ಕೃಶವಾಗಿದ್ದರೆ ಮತ್ತು ಮೂರು ಭಾಗ ಉದ್ದವಾಗಿದ್ದರೆ ಅಂತಹ ಕುದುರೆಯ ಸಂಪೂರ್ಣ ಶರೀರವು ಶುಭವನ್ನುಂಟು ಮಾಡುತ್ತದೆ ಹಾಗೂ ರಾಜನಿಗೆ ಸುಖವನ್ನು ರಾಜ್ಯವನ್ನು ಸಂಪತ್ತನ್ನು ಕೊಡುತ್ತದೆ.

ಕುದುರೆಯ ವಿಶಾಲವಾದ ಎದೆ, ಹಣೆ ಹಾಗೂ ಬೆನ್ನು ಈ ಮೂರು ಭಾಗಗಳು ಪ್ರಶಸ್ತವಾದುದೆಂದು ತಿಳಿಯಬೇಕು. ಕುದುರೆಗೆ ಸಣ್ಣದಾದ ಕಿವಿಗಳು ಸಣ್ಣದಾದ ಹಿಂಭಾಗ ಮತ್ತು ಕರುಳು ಸಣ್ಣದಾಗಿ ಇದ್ದರೆ ಆ ಮೂರನ್ನು ಶುಭಕರವಾದುದೆಂದು ತಿಳಿಯಬೇಕು. ಕುದುರೆಯ ಮೃದುವಾದ ಬಾಲ, ಕೂದಲು ಹಾಗೂ ಕೇಸರಗಳು ಈ ಮೂರು ಮಂಗಳಕರವಾದುದೆಂದು ಕುದುರೆಯ ದೊಡ್ಡದಾದ ಬಾಯಿ ಕಣ್ಣುಗಳು ಮತ್ತು ತಲೆ ಪ್ರಶಸ್ತವಾದುದೆಂದು ತಿಳಿಯಬೇಕು. ಕುದುರೆಗೆ ತೆಳುವಾದ ತುಟಿಗಳು, ನಾಲಿಗೆ ಮತ್ತು ಕಟಬಾಯಿ ಇದ್ದರೆ ಅವುಗಳು

ಶುಭವನ್ನುಂಟುಮಾಡುತ್ತವೆ ಎಂದು ತಿಳಿಯಬೇಕು. ಕುದುರೆಯ ಉದ್ದವಾದ ಕತ್ತು ಮಂಡಿಯ ಕೆಳಭಾಗ ಮತ್ತು ಮುಖ ಈ ಮೂರು ಮಂಗಳವನ್ನುಂಟು ಮಾಡುತ್ತದೆ ಎಂದು ತಿಳಿಯಬೇಕು.

ಚಂದ್ರನ ಕಿರಣಗಳಂತೆ ಬಿಳುಪಾಗಿರುವ ಹಂಸದಂತೆ, ಮುತ್ತಿನ ಮಣಿಯಂತೆ ಬೆಳ್ಳಗಿರುವ, ಶುದ್ಧವಾದ ಚಿನ್ನದಂತೆ ಬಣ್ಣವುಳ್ಳ, ತಾವರೆಯ ದಂಟಿನ ಬಣ್ಣದಂತಿರುವ, ಅರಳುತ್ತಿರುವ ಬಿಳಿಯ ಕಮಲದಂತೆ ಇರುವ, ಮುತ್ತುಗದ ಹೂವಿನಂತೆ ಕೆಂಪಗಿರುವ, ಗಿಳಿಯಂತೆ ಬಣ್ಣವುಳ್ಳ, ಕನ್ನೈದಿಲೆ ಮತ್ತು ಇಂದ್ರನೀಲಮಣಿಯಂತೆ ಹೊಳೆಯುತ್ತಿರುವ, ದುಂಬಿಯಂತಿರುವ, ಕೋಗಿಲೆಯಂತಿರುವ, ನೀರಿನಿಂದ ಕೂಡಿದ ಮೋಡದಂತಿರುವ, ಮಂಗಳಕರವಾದ ಅಂಜನಪರ್ವತದಂತೆ, ಆಗ ತಾನೆ ಉದಯಿಸಿದ ಸೂರ್ಯನಂತೆ, ಅಶೋಕಪುಷ್ಪದ ಗೊಂಚಲಿನಂತೆ ಕೆಂಪಾಗಿರುವ ಕೆಂಪಾದ ಕಮಲದಂತೆ ಕೆಂಪಾಗಿರುವ ಮತ್ತು ಅರಗಿನ ರಸದಂತೆ ಕೆಂಪಾಗಿರುವ ಮೇಲೆ ತಿಳಿಸಿದ ಹೋಲಿಕೆಯನ್ನು ಹೊಂದಿರುವಂತಹ ಕುದುರೆಗಳು ಯುದ್ಧದಲ್ಲಿ ಧೈರ್ಯವಾಗಿ ಮುನ್ನುಗ್ಗುತ್ತವೆ. ಎಲ್ಲ ರೀತಿಯ ಭಾರವನ್ನು ಹೊರುವ ಸಾಮರ್ಥ್ಯವನ್ನು ಹೊಂದಿ ಶ್ರೇಷ್ಠವಾದ ಕುದುರೆ ಎನಿಸುತ್ತವೆ.

ಉದ್ದವಾದ ಕತ್ತುಳ್ಳ, ಸುಂದರವಾದ ಪಕ್ಕೆಗಳುಳ್ಳ, ವಿಶಾಲ ಕಣ್ಣುಗಳು, ಸೊಂಟ, ಭುಜಗಳು, ಎದೆ ಮತ್ತು ಹಣೆಯನ್ನು ಉಳ್ಳ, ಚಿಕ್ಕದಾದ ಅಂಡಕೋಶಗಳನ್ನು ಮತ್ತು ಕಿವಿಯನ್ನು ಹೊಂದಿರುವ ಗಡುಸಾದ ಕತ್ತೆಯ ಗೊರಸಿನಂತೆ ಗೊರಸುಳ್ಳ, ಉದ್ದವಾದ ಮಾಂಸರಹಿತವಾದ ಮೊಣಕಾಲುಳ್ಳ, ಸೂಕ್ಷ್ಮವಾದ ಕೂದಲು, ಚರ್ಮ, ಬಾಲ, ಮೃದುವಾದ ಶರೀರ, ನಾಲಿಗೆ, ಮೂಗಿನ ಹೊಳ್ಳೆಗಳು, ಕಟಬಾಯಿ, ತುಟಿಗಳು ಮತ್ತು ಕೂದಲುಗಳನ್ನುಳ್ಳ

ಕುದುರೆಗಳು ಶುಭ್ರವಾದ ಸುಳಿಗಳ ಆಕಾರ, ಬಿಳುಪಾದ ಒತ್ತಾದ ಹಲ್ಲುಗಳು ಒಳ್ಳೆಯ ಕಾಂತಿಯಿಂದ ಕೂಡಿದ, ನಿರ್ಮಲವಾದ ತೇಜಸ್ಸಿನಿಂದ ಕೂಡಿದ, ಜನರ ಮನಸ್ಸಿಗೆ ಸಂತೋಷವನ್ನುಂಟುಮಾಡುವ, ಮನೋಹರವಾದ ಬಣ್ಣವುಳ್ಳ ಕುದುರೆಯು (ಮೇಲೆ ಹೇಳಿದ ಲಕ್ಷಣಗಳನ್ನುಳ್ಳ ಕುದುರೆಯು) ಯಾವ ರಾಜನ ಬಳಿ ಇರುತ್ತದೋ ಅಂತಹ ಕುದುರೆಯ ಗೊರಸಿನ ತುದಿಯಲ್ಲಿ ಲಕ್ಷ್ಮಿಯು ಸಮುದ್ರದಲ್ಲಿ ಮಲಗಿರುವ ವಿಷ್ಣುವಿನ ವಕ್ಷಸ್ಥಳವನ್ನು ಬಿಟ್ಟು ಸಕಲಭೋಗಗಳೊಡನೆ ಇವನಲ್ಲಿ ಬಂದು ನೆಲಸುತ್ತಾಳೆ. ರಾಜನನ್ನು ಹೊರಲು ಯೋಗ್ಯವಾದ ಕುದುರೆಯ ಬಣ್ಣವು ನೀರನ್ನು ತುಂಬಿಕೊಂಡಿರುವ ಮೋಡದಂತೆ, ದುಂಬಿಯಂತೆ, ಕೋಗಿಲೆಯಂತೆ, ಅರಳುತ್ತಿರುವ ಬಿಳಿ ಕಮಲದಂತೆ, ಚಂದ್ರನ ಬೆಳದಿಂಗಳಿನಂತೆ, ದೇವಗಂಗೆಯ ನೀರಿನಂತೆ, ಹಿಮಾಲಯ ಪರ್ವತದಲ್ಲಿ ಕಂಗೊಳಿಸುವ ಹಿಮದಂತೆ, ಮಧ್ಯಾಹ್ನದ ಪ್ರಖರವಾದ ಸೂರ್ಯನಂತೆ, ಅಥವಾ ಕೆಂದಾವರೆಯ ದಳದ ಕಾಂತಿಯಂತೆ ಹೊಳೆಯುವ ಚಿನ್ನದ ಕಾಂತಿಯಂತೆ ಇರುತ್ತದೆ.

ಕಣ್ಣುಗಳಿಗೆ ಆಪ್ಯಾಯಮಾನವಾಗಿರುವ ಚಿತ್ತಾಕರ್ಷಕವಾದ ಹೊಳೆಯುತ್ತಿರುವ ಬಿಳಿಬಣ್ಣವುಳ್ಳ, ಒಳ್ಳೆಯ ಸುಳಿಗಳುಳ್ಳ, ದೃಢವಾದ ಉಬ್ಬಿದ ತೋಳುಗಳುಳ್ಳ, ಜಿಂಕೆ–ಸಿಂಹದಂತೆ ನೋಟವುಳ್ಳ, ಸದೃಢವಾದ ಶರೀರವುಳ್ಳ, ಅಗಲವಾದ ಬೆನ್ನುಳ್ಳ, ಉತ್ಕೃಷ್ಟವಾದ ತೇಜಸ್ಸಿನಿಂದ ಕೂಡಿದ ಒಳ್ಳೆಯ ಲಕ್ಷಣಗಳಿಂದ ಕೂಡಿ, ಸರ್ವಾಂಗಗಳಿಂದ ಕಂಗೊಳಿಸುವ, ವೇಗವಾಗಿ ಓಡುವ, ಕಾಂತಿಯುಳ್ಳ, ಮನೋಹರವಾದ ಗಂಧದ ನೀರಿನಂತೆ ಆಪ್ಯಾಯಮಾನವಾದ, ಗಂಭೀರವಾಗಿ ಕೆನೆಯುವ ಕುದುರೆಯನ್ನು ರಾಜನ ವಾಹನಕ್ಕೆ ಯೋಗ್ಯವಾದ ಕುದುರೆಯೆಂದು ಹಾಗೂ ಮಂಗಳವನ್ನು ಉಂಟುಮಾಡುವುದೆಂದು ತಿಳಿಯಬೇಕು.

ರಾಜನೇ, ಇಂತಹ ಧರ್ಮಾರ್ಥಕಾಮಗಳನ್ನು ಕೊಡುವಂತಹ, ಯುದ್ಧದಲ್ಲಿ ಶತ್ರುಗಳನ್ನು ಗೆಲ್ಲುವಂತಹ ಮಂಗಳದಾಯಕವಾದ ಕುದುರೆಯನ್ನು ನಿನ್ನ ವಾಹನವನ್ನಾಗಿ ಮಾಡಿಕೋ.

ಚಿನ್ನದಂತೆ ಹೊಳೆಯುವ ಬಣ್ಣವಿರುವ ಕುದುರೆ ಯಾರ ಬಳಿಯಲ್ಲಾದರೂ ಇದ್ದರೆ ಅದು ಸಂಪತ್ತನ್ನು ಕೊಡುತ್ತದೆ. ಚಂದ್ರನಂತೆ ಇದ್ದರೆ ಶತ್ರುಗಳ ನಾಶ ಉಂಟಾಗುತ್ತದೆ, ಅಗಸೆ ಹೂವಿನಂತೆ ಬಣ್ಣವಿದ್ದರೆ ಶತ್ರುಗಳನ್ನು ಗೆಲ್ಲುತ್ತಾರೆ, ಸಾರಸಪಕ್ಷಿಯಂತಿದ್ದರೆ ಉತ್ಕೃಷ್ಟಾರ್ಥದ ಸಿದ್ಧಿಯುಂಟಾಗುತ್ತದೆ ಹಾಗೂ ನಿರ್ಬಲನಾದ ಒಬ್ಬಂಟಿಗನಾದ ಸ್ವಾಮಿಯು ಯುದ್ಧದಲ್ಲಿ ಗೆಲ್ಲುತ್ತಾನೆ. ಬಹಳ ಕಾಲ ರಾಜನಾಗುತ್ತಾನೆ. ಕ್ರೌಂಚಹಕ್ಕಿಯ ರೆಕ್ಕೆಯ ಬಣ್ಣದಂತಿದ್ದರೆ ಅಥವಾ ಕೋಳಿಬಣ್ಣದಂತಿದ್ದರೆ ರಾಜನು ಯುದ್ಧದಲ್ಲಿ ಶತ್ರುಗಳನ್ನು ಜಯಿಸುತ್ತಾನೆ.

ಯಾವ ಕುದುರೆಯ ಅಂಗಳು, ಅಂಡಕೋಶ, ಗೊರಸು, ಬಾಲ, ತಲೆ, ಕಣ್ಣುಗಳು ಬಿಳುಪಾಗಿಯೂ ಕಪ್ಪಾಗಿಯೂ ಇದ್ದರೆ ಅದನ್ನು ತ್ಯಜಿಸಬೇಕು. ಅದರಿಂದ ಕೋಶದ ನಾಶವುಂಟಾಗುತ್ತದೆ.

ಕುದುರೆಯ ಬಣ್ಣ ಬಿಳುಪಾಗಿದ್ದರೆ ಅದು ಮಂಗಳಕರವಾದ ಕುದುರೆಯೆಂದು ತಿಳಿಯಬೇಕು. ಅದರಿಂದ ಶತ್ರುಗಳ ಪಕ್ಷವು ನಾಶವಾಗುತ್ತದೆ. ಮಿತ್ರರು ಹಾಗೂ ಸಂಪತ್ತು ವೃದ್ಧಿಹೊಂದುತ್ತದೆ. ಅಲ್ಲದೆ ತನ್ನ ಸ್ವಾಮಿಗೆ ಮಂಗಳವನ್ನುಂಟು ಮಾಡುತ್ತದೆ. ಬೆಂಕಿಯ ಬಣ್ಣದ ಹಾಗೆ ಇರುವ ಮಾಗಿದ ತಾಳೆಹಣ್ಣಿನಂತೆ ಕೆಂಪಾದ, ಚಿನ್ನದಂತೆ ಹೊಳೆಯುವ, ನರಿಯಂತಿರುವ, ಹಂದಿಯ ಬಣ್ಣದಂತೆ, ಪಾರಿವಾಳದಂತೆ, ಕಪ್ಪಗಿರುವ ಮೋಡದಂತೆ, ಇಲಿಯ ಬಣ್ಣದಂತೆ, ಕಾಗೆಯ ಕೊಕ್ಕಿನಂತೆ, ಹೊಗೆಯ ಬಣ್ಣದಂತೆ ಇರುವ ತೋಳದಂತೆ, ಗೂಬೆಯಂತೆ ಇರುವ

ಈ 12 ರೀತಿಯಾದ ಕುದುರೆಗಳು ಅಮಂಗಳಕರವಾಗಿದ್ದು, ಪಾಪವನ್ನು ಉಂಟುಮಾಡುತ್ತವೆ ಹಾಗೂ ತನ್ನ ಸ್ವಾಮಿಗೆ ಅನಾರೋಗ್ಯವನ್ನುಂಟುಮಾಡುತ್ತವೆ.

ಯಾವ ಕುದುರೆ ಬಿಳಿಬಣ್ಣದಿಂದ ಕೂಡಿದ್ದು ಕಪ್ಪಾದ ಅಂಗಳು, ಕಣ್ಣು, ಅಂಡಕೋಶ, ಗೊರಸು, ಬಾಲ ಮತ್ತು ಕೂದಲುಗಳಿಂದ ಕೂಡಿರುತ್ತದೋ ಅಂತಹ ಕುದುರೆಯಿಂದ ಕೋಶವು, ರಾಷ್ಟ್ರವು ನಾಶವಾಗುತ್ತದೆ. ಯಾವ ಕುದುರೆಯ ಪಾದವು ಕೆಂಪು ಅಥವಾ ಕಪ್ಪಗಿದ್ದು ಅವುಗಳಲ್ಲಿ ಬಿಳಿಯ ಅಥವಾ ಕೆಂಪುಬಣ್ಣದಿಂದ ಕೂಡಿದ ಚಿಹ್ನೆಗಳಿದ್ದರೆ ಅಂತಹ ಕುದುರೆ ತನ್ನ ಸ್ವಾಮಿಯನ್ನು ಯುದ್ಧದಲ್ಲಿ ನಾಶಮಾಡುತ್ತದೆ.

## 9. ಪುಂಡ್ರಲಕ್ಷಣಾಧ್ಯಾಯ

ಸುಳಿಗಳನ್ನು ಹೇಳಿದ ನಂತರ ಪುಂಡ್ರಗಳ (ಬೊಟ್ಟುಗಳ) ಮಂಗಳಕರವಾದ ಲಕ್ಷಣವನ್ನು ಹೇಳುತ್ತೇನೆ.

ಕುದುರೆಯ ಪ್ರಪಾಣದಿಂದ ಪ್ರಾರಂಭವಾಗಿ ಕಿವಿಯ ಕೆಳಭಾಗದವರೆವಿಗೂ ಬಿಳಿಯ ಅಥವಾ ಅತ್ಯಂತ ಬಿಳುಪಾದ ಬೊಟ್ಟುಗಳಿದ್ದರೆ ಅದನ್ನು "ಪುಂಡ್ರ" ಎಂದು ಕರೆಯುತ್ತಾರೆ. ಆ ಪುಂಡ್ರಗಳ ಸ್ಥಾನವಿಶೇಷದಿಂದ ಅವುಗಳು ಮಂಗಳಕರವೋ ಅಥವಾ ಅಮಂಗಳಕರವೋ ಎಂದು ನಿರ್ಧರಿಸಲ್ಪಡುತ್ತವೆ.

ಕಮಲದಳ, ಕಲಶ, ನೇಗಿಲು, ಒನಕೆ, ತ್ರಿಕೋಣಾಕಾರದ ಬಾವುಟ, ಧ್ವಜ, ಅಂಕುಶ, ಕನ್ನಡಿ, ಬಿಲ್ಲು, ಶಂಖ, ಛತ್ರ, ಸ್ವಸ್ತಿಕ, ಚಿನ್ನದಕಲಶ, ವಜ್ರ, ಚಾಮರ, ಆಮೆ, ಅಷ್ಟಪಾದ, ವೇದಿಕೆ, ಖಡ್ಗ, ಇವುಗಳ ಆಕಾರದಲ್ಲಿರುವ ಪುಂಡ್ರಗಳು ಯಜಮಾನನಿಗೆ ಐಶ್ವರ್ಯವನ್ನು, ಮಕ್ಕಳನ್ನು ಹಾಗೂ ಮೊಮಕ್ಕಳನ್ನು ಕೊಡುತ್ತವೆ.

ಸಂಪೂರ್ಣವಾಗಿ ಬಿಳುಪಾಗಿರುವ ಮುಖದಲ್ಲಿ ನಾಲ್ಕು ಕೋನಾಕೃತಿ-ಯಲ್ಲಿರುವ ಅಥವಾ ಖಡ್ಗಾಕೃತಿಯಲ್ಲಿರುವ ಪುಂಡ್ರವು ಇದ್ದರೆ, ಅಂತಹ ಕುದುರೆಯು ಪುಣ್ಯಪ್ರದವಾದುದೆಂದು ತಿಳಿಯಬೇಕು. ಸ್ವಸ್ತಿಕ ಚಿಹ್ನೆಯ ಪುಂಡ್ರವು ಎಲ್ಲಾ ಆಸೆಗಳನ್ನು ಈಡೇರಿಸುತ್ತವೆ, ಮತ್ತು ಕಂಕುಳಲ್ಲಿರುವ ಪುಂಡ್ರವು ಸ್ವಾಮಿಯ ಇಷ್ಟಾರ್ಥವನ್ನು ಅತಿಶಯವಾಗಿಯೇ ಈಡೇರಿಸುತ್ತವೆ.

ಅಡ್ಡಲಾಗಿ ಆಯತಾಕಾರದಲ್ಲಿರುವ ಪುಂಡ್ರದಿಂದ ಹಣದ ನಾಶವೆಂದು ತಿಳಿಯಬೇಕು. ಕಪ್ಪು ಬಿಳುಪು ಬೆರೆತ ಬಣ್ಣದಿಂದ ಕೂಡಿದ ಪುಂಡ್ರದಿಂದ ಕಷ್ಟ, ಹೊಟ್ಟೆಯಲ್ಲಿ ಶೂಲಾಕಾರದ ಪುಂಡ್ರದಿಂದ ದುಃಖ ಹಾಗೂ ಸ್ವಾಮಿಗೆ ಹಗ್ಗ ಮತ್ತು ಸರಪಳಿಗಳಿಂದ ಬಂಧನ ಉಂಟಾಗುತ್ತದೆ. ಈ ರೀತಿಯಾಗಿ ಮಂಗಳ ಮತ್ತು ಅಮಂಗಳವನ್ನು ಉಂಟುಮಾಡುವ ಪುಂಡ್ರಗಳ ಬಗ್ಗೆ ಹೇಳಲಾಗಿದೆ.

ಮೂಗು, ಪ್ರಾಪಾಣ, ಎಡಪಕ್ಕೆಗಳಲ್ಲಿ ಪುಂಡ್ರವಿರಬಾರದು. ಕುತ್ತಿಗೆಯಲ್ಲಿ ಪುಂಡ್ರವಿದ್ದರೆ ಅದನ್ನು ತ್ಯಜಿಸಬೇಕು. ನಾಲಿಗೆಯಲ್ಲಿ ಕಪ್ಪು ಬಿಳುಪು ಬೆರತ ಬಣ್ಣಗಳಿಂದ ಕೂಡಿದ ಪುಂಡ್ರವಿದ್ದರೆ, ಒರಟಾಗಿರುವ, ವಿಚಿತ್ರವಾಗಿರುವ, ತೆಳುವಾಗಿರುವ, ಹಳದಿ, ಕೆಂಪು, ಬಿಳುಪು ಬಣ್ಣಗಳಿಂದ ಕೂಡಿದ ಪುಂಡ್ರಗಳಿದ್ದರೆ, ಅದು ಅಮಂಗಳವನ್ನು ಉಂಟುಮಾಡುವ ಕುದುರೆಯೆಂದು ತಿಳಿಯಬೇಕು.

ಮಂಗಳಕರವಾದ, ಅಮಂಗಳಕರವಾದ ಲಲಾಮ ರೂಪದ ಕುದುರೆಯ ಬಗ್ಗೆ ಹೇಳಲಾಗುತ್ತದೆ. ಹಣೆಯ ಮಧ್ಯಭಾಗವು ಬಿಳುಪಾಗಿದ್ದು ಅದು ನಕ್ಷತ್ರಾಕಾರದಲ್ಲಿದರೆ [ಹಣೆಯ ಮಧ್ಯಭಾಗದಲ್ಲಿರುವ ಚಿತ್ರ ಅಥವಾ ಚಿಹ್ನೆ] ಅದನ್ನು **'ಲಲಾಮಕುದುರೆ'**ಯೆಂದು ಕರೆಯುತ್ತಾರೆ. ಅದರ ಫಲವನ್ನು ಸ್ಥಾನವಿಶೇಷದಿಂದ ತಿಳಿಯಬೇಕು. ಅರ್ಧಚಂದ್ರ, ಚಂದ್ರ, ಸೂರ್ಯ, ನಕ್ಷತ್ರದಂತೆ ಅವುಗಳು ಹೊಳೆಯುತ್ತವೆ. ಇಂತಹ ಕುದುರೆಗಳು ಯಾರ ಬಳಿಯಲ್ಲಿರುತ್ತವೆಯೋ

ಅಂತಹವರು ರಾಜರಾಗುತ್ತಾರೆ. ತಮಟೆ, ಕಾಗೆಯ ಪಾದ, ಎಡಭಾಗಕ್ಕೆ ವಾಲಿದ್ದರೆ ಅಂತಹ ಆಕಾರದ ಲಲಾಮ ಕುದುರೆಯಿಂದ ಸ್ವಾಮಿಗೆ ಸಾವು ಹಾಗೂ ಸಂಪತ್ತಿನ ನಾಶವುಂಟಾಗುತ್ತದೆ.

ತಲೆ, ಕಿವಿಗಳು, ಕಣ್ಣುಗಳು, ಕೂದಲು, ಎಡ ಪಾದ, ಹಲ್ಲುಗಳು ಈ ಭಾಗಗಳಲ್ಲಿ ಒಂದೇ ಬಣ್ಣದಿಂದ ಕೂಡಿದ ಚಿಹ್ನೆಗಳಿದ್ದರೆ ಅಂತಹ ಕುದುರೆಯನ್ನೇರಿದ ರಾಜನು ಶತ್ರುಗಳನ್ನು ಗೆಲ್ಲುತ್ತಾನೆ.

ಪುಂಡ್ರಗಳ ವಿಕಲ್ಪಗಳನ್ನು ಚಿಹ್ನೆಗಳಿಂದ ಅಂಕಿತವಾಗಿರುತ್ತದೆಂದು ಶಾಲಿಹೋತ್ರ ಮುನಿಗಳು ಹೇಳುತ್ತಾರೆ. ಕಿವಿಗಳು, ಹಣೆ, ಮೂಗು, ತಲೆ, ಬೆನ್ನಿನ ಹಿಂಭಾಗ, ಹುಬ್ಬು, ಕಿವಿಗಳ ತುದಿಯಲ್ಲಿ, ಮೂಗಿನಹೊಳ್ಳೆ, ಜನನೇಂದ್ರಿಯದ ತುದಿ, ಬಾಲ, ಇತ್ಯಾದಿ ಭಾಗಗಳಲ್ಲಿ ಪುಂಡ್ರವು ಬೇರೆ ಬೇರೆ ಬಣ್ಣಗಳಿಂದ ಕೂಡಿದ್ದರೆ ಅಂತಹ ಕುದುರೆಗಳು ದೋಷಯುತವಾದವು ಮತ್ತು ಅಂತಹ ಕುದುರೆಯನ್ನೇರಿದ ರಾಜನು ನಿರಾಶನಾಗಿ ಹಿಂದಿರುಗುತ್ತಾನೆ.

## 10. ಕುಲಲಕ್ಷಣಾಧ್ಯಾಯ

**ಕುದುರೆಗಳ ಕುಲಗಳ ಲಕ್ಷಣವನ್ನು ಕೇಳು–**

ಕಾಂಭೋಜ, ಬಾಹ್ಲೀಕ, ವನಾಯುಜ, ಗಾಂಧಾರ, ಆರಟ್ಟಜ, ಚಾಂಪೇಯ, ಸೈಂಧವ, ತೈತ್ತಿಕ, (ತೈತ್ತಜ) ಕುಲಜಾ, ಉಪಕುಲಜ, ಮೇಚಕ, ಉಪಮೇಚಕ, ಕೈವರ್ತ [ತ್ರೈಗರ್ತ] ಅರ್ಜುನೀಯ, ಸಾವಿತ್ರೇಯ, ಯೌಧೇಯ, ಯಾವನ, ಹ್ರಸ್ವಯಾವನ, ತುಷಾರ, ಕಾದರೇಯ, ಪಾರ್ವತೀಯ, ಆವಂತಿ, ಕಾಶ್ಮೀರದೇಶಗಳ ಕುದುರೆಗಳು, ಕಾಡಿನಲ್ಲಿರುವ ಕುದುರೆಗಳು, ಪರ್ವತೀಯ, ಉತ್ತರ ಭಾಗದಲ್ಲಿರುವ, ದಕ್ಷಿಣ ಭಾಗದಲ್ಲಿರುವ, ದ್ವೀಪದ ಮಧ್ಯಭಾಗದಲ್ಲಿರುವ, ಕೈಕೇಯ, ಅಂಬಷ್ಠ,

ವಾಸಂತಿಕ, ಸೌವೀರ, ದಾರದ, ಸ್ಯೆರಿಕಾ, ಕ್ಯೆರಾತ, ಕ್ಷುದ್ರಃ, ಕೈರಾತ, ಮಾಲವ, ವಿಂಧ್ಯಾಪ್ರದೇಶ, ಕಳಿಂಗ, ಮಥುರಾ, ಮನುಷ್ಯ ಸ್ವಭಾವದ ಕುದುರೆಗಳು, ಕೌಸಲ, ಆವರ್ತಕ, ಉಪವೃತ್ತಿಕ, ಸೌರಾಷ್ಟ್ರ, ಸೌವೀರ, ಕೌರವೇಯ, ಪಾಂಚಾಲ, ಪೌಂಡ್ರಕ, ಕುಕ್ಕುಟಪ್ರದೇಶ, ಹ್ರಸ್ವಕುಕ್ಕುಟ, ಹೈಮವತ, ಮಗಧ, ಈ ರೀತಿಯಾಗಿ 54 ಪ್ರಕಾರದ ಕುದುರೆಯ ಕುಲವನ್ನು ಹೇಳಲಾಗಿದೆ. ಮತ್ತೆ ಒಂಬತ್ತು ಪ್ರಕಾರದ ಕುದುರೆಯ ಕುಲವನ್ನೂ (ಘೋಟಕವನ್ನು) ಹೇಳಲಾಗಿದೆ. ಇವುಗಳು ಕುದುರೆಯಂತೆ ಕಂಡುಬಂದರು ಕುದುರೆಗಳಲ್ಲಿರಬೇಕಾದ ಗುಣಗಳಿಲ್ಲ.

ಮತ್ತ, ಆವಿಕ, ಆಶ್ಮಕ, ಇಯಾಮ, ಅಲಿಕಗಳೆಂಬ ಬಿಳಿಯ ಕುದುರೆಗಳು, ಮೇಚಕಾ, ಶ್ವೇತಗಿರಿಜಾ, ವೈದರ್ಭ ಎಂಬುದಾಗಿ ಕುದುರೆಯ ಕುಲವನ್ನು ಹೇಳಲಾಗಿದೆ. ಪೂರ್ವಭಾಗ, ದಕ್ಷಿಣಭಾಗ ಮತ್ತು ಹಿಮಾವೃತ ಪ್ರದೇಶದಲ್ಲಿರುವ ಕಪ್ಪಾದ ಕುದುರೆಯನ್ನು **'ಘೋಟಕ'** ಕುದುರೆಗಳೆಂದು ತಿಳಿಯಬೇಕು. ಅನಂತರ ಕುದುರೆಗಳಲ್ಲಿರುವ ಚಿಹ್ನೆಗಳನ್ನು ಹೇಳಿ, ಅವುಗಳ ಕುಲದ ಗುಣಗಳನ್ನು ಪ್ರತ್ಯೇಕವಾಗಿ ಹೇಳುವೆನು, ಅವುಗಳನ್ನು ಕೇಳು.

**ಕಾಂಭೋಜ ಕುದುರೆಗಳು –**

ಕಾಂಭೋಜ ದೇಶದ ಕುದುರೆಗಳು ವಿಶಾಲವಾದ ಹಣೆ, ಹಿಂಭಾಗ, ಹೆಕ್ಕತ್ತು ಎದೆಯನ್ನು ಹೊಂದಿರುತ್ತವೆ, ಉದ್ದವಾದ ಕತ್ತು, ಮುಖವನ್ನು ಹೊಂದಿ, ವೇಗವಾಗಿ ಚಲಿಸುವಂತಹ ಕುದುರೆಗಳಾಗಿರುತ್ತವೆ. ಚಿಕ್ಕದಾದ ಅಂಡಕೋಶ, ಲಕ್ಷಣವಾದ ದೊಡ್ಡದಾದ ಉಬ್ಬಿದ ಕಾಲುಗಳು, ಉದ್ದವಾದ ಭುಜಗಳು, ಈ ಎಲ್ಲಾ ಚಿಹ್ನೆಗಳಿಂದ ಕೂಡಿ ಪೂಜಿಸಲ್ಪಡುವ, ಗಟ್ಟಿಯಾದ ಗೊರಸುಳ್ಳ, ಕಪ್ಪೆಯ ಕಣ್ಣಿನಂತಿರುವ ಕಣ್ಣುಳ್ಳ, ಬಿಳಿಯ ಅಥವಾ ಕೆಂಪು ಬಣ್ಣದಿಂದ ಕೂಡಿದ ದೀನತೆ ಇಲ್ಲದ, ಕಪ್ಪು ಅಥವಾ ಬೇರೆ ಬೇರೆ ಬಣ್ಣಗಳಿಂದ ಕೂಡಿರದೆ ಚಿಕ್ಕದಾದ

ಹುಬ್ಬಿನ ಮಧ್ಯಭಾಗವುಳ್ಳ, ಮೃದುವಾದ ಕೂದಲುಗಳಿಂದ ಕೂಡಿದ, ಚಿಕ್ಕ ಬೆನ್ನು ಮತ್ತು ಒಳ್ಳೆಯ ಕಾಂತಿಯುಕ್ತವಾದ ಬಣ್ಣಗಳುಳ್ಳ, ಒಳ್ಳೆಯ ಅಂಗಸೌಷ್ಠವದಿಂದ ಕೂಡಿದ, ಮನೋಹರವಾದ ರೂಪವುಳ್ಳ, ಸ್ವಾಮಿಯ ವಶದಲ್ಲಿರುವ, ಸುಂದರವಾದ, ತೇಜಸ್ವಿಯಾದ, ಸತ್ವಯುತವಾದ, ಒಳ್ಳೆಯ ನಡತೆಯುಳ್ಳ, ಮಂಗಳಕರವಾದ, ಒಳ್ಳೆಯ ಆಕಾರದಿಂದ ಕೂಡಿ ತನ್ನ ಕುಲದ ಬಗ್ಗೆ ಹೆಮ್ಮೆ ಪಡುವ, ಗುಂಡಾಗಿರುವ ಮಂಡಿ ಮೊಣಕಾಲುಳ್ಳ, ವೃತ್ತಾಕಾರದ ಅಂಗಗಳಿಂದ ಕೂಡಿದ, ಚಿಕ್ಕದಾದ ಕುಷ್ಠಿ, ಕೈಗಳು, ಹಾಗು ಗೊರಸುಗಳುಳ್ಳ, ದಪ್ಪದಾದ ಅಥವಾ ಸಣ್ಣದಾಗಿರುವ ಬಾಲವುಳ್ಳ, ದಪ್ಪದಾದ ಕಣ್ಣುಳ್ಳ, ಶಂಖದಂತಿರುವ ಕಿವಿಯುಳ್ಳ, ಅಗಲವಾದ ಕಟಬಾಯಿ ಮತ್ತು ಮೂಗುಳ್ಳ, ದೊಡ್ಡ ಹೊಟ್ಟೆ, ಒಳ್ಳೆಯ ನಿಟ್ಟುಸಿರು (ಶಬ್ದರಹಿತವಾದ ನಿಟ್ಟುಸಿರು), ಹೆಣ್ಣು ಕುದುರೆಯನ್ನು ನೋಡಿಯೂ ಕೂಗದಿರುವ (ಆಕರ್ಷಿಸಲ್ಪಡದಿರುವ), ಮೇಲ್ಮುಖವಾಗಿರುವ, ದೃಢವಾದ ಕಾಲುಗಳುಳ್ಳ, ಮಂಗಳಕರವಾದ ಕೂದಲುಳ್ಳ, ಒಳ್ಳೆಯ ಪಕ್ಕೆಗಳುಳ್ಳ, ಧೈರ್ಯದಿಂದ ಕೂಡಿದ, ಅನಾಯಾಸವಾಗಿ ಸಂಚರಿಸುವ ಕುದುರೆಯನ್ನು ಅಂದರೆ ಈ ಮೇಲೆ ಹೇಳಿದ ಎಲ್ಲಾ ಲಕ್ಷಣದಿಂದ ಕೂಡಿರುವ ಕುದುರೆಯನ್ನು ಕಾಂಭೋಜ ಕುದುರೆಯೆಂದು ಕರೆಯುತ್ತಾರೆ.

**ಬಾಹ್ಲೀಕ ಕುದುರೆಗಳು –**

ಕಾಂಭೋಜ ಪ್ರದೇಶದ ಕುದುರೆಗಳಿಗೆ ಸಮಾನವಾದ ಅವಯವ, ಬಣ್ಣ ರೂಪವಿದ್ದರೂ, ಇವುಗಳಿಗೆ ವಿಶೇಷವಾಗಿ ಉದ್ದವಾದ ಹೊಟ್ಟೆ ಬೆನ್ನುಗಳಿರುತ್ತವೆ. ವಿಶಾಲವಾದ ಉದ್ದವಾದ ಸ್ವಲ್ಪ ದಪ್ಪದಾಗಿರುವ ಕಣ್ಣುಗಳಿಂದ ಕೂಡಿರುವ, ಹೆಚ್ಚಾದ ಪರಾಕ್ರಮದಿಂದಿರುವ, ಹೃದಯ ಬೆನ್ನು ಕತ್ತು ಹಲ್ಲುಗಳು ಉದ್ದವಾಗಿದ್ದು, ಜೇನುತುಪ್ಪದ ಬಣ್ಣದಂತಿರುವ ಕಣ್ಣುಳ್ಳ, ಕೋಪದಿಂದ ಹಲ್ಲನ್ನು ಕಡಿಯುವ,

ಸ್ವಾಮಿಯ ಬಗ್ಗೆ ಕರುಣೆಯಿಂದ ಕೂಡಿರುವ, ಅತಿ ವೇಗವಾಗಿ ಓಡುವ, ಸುಂದರ ಆಕಾರದಿಂದ ಕೂಡಿದ ಕುದುರೆಯನ್ನು **ಬಾಹ್ಲೀಕ ಕುದುರೆಯನ್ನು**ತ್ತಾರೆ.

**ವನಾಯುಜ ಕುದುರೆಗಳು –**

ವನಾಯುಜ ಕುಲಕ್ಕೆ ಸೇರಿದ ಕುದುರೆಗಳು ಹಗುರವಾಗಿರುತ್ತವೆ, ಭಯಂಕರವಾದ ಮಧ್ಯ ಭಾಗದಿಂದ ಕೂಡಿರುತ್ತದೆ. ಚಂಚಲ ಸ್ವಭಾವದಿಂದಿದ್ದು ದೀನತೆಯಿಂದ ಕೂಡಿರದೆ ವೃತ್ತಾಕಾರ, ಆಯತಾಕಾರ ಶರೀರದಿಂದ ಕೂಡಿ, ಸುಂದರವಾದ ಕಣ್ಣುಗಳನ್ನು ಹೊಂದಿ, ಚಿಕ್ಕದಾದ ಅಂಡಕೋಶಗಳನ್ನು ಹೊಂದಿ ಶಂಖದಾಕಾರದ ಕಿವಿಗಳಿಂದ ಕೂಡಿ, ಪೂರ್ವದ ಶರೀರವು ಉಬ್ಬಿದ್ದು, ತಗ್ಗಿರುವ ಹಿಂಭಾಗವನ್ನು ಹೊಂದಿರುತ್ತದೆ ಮತ್ತು ಭಾರವನ್ನು ಹೊರುವಂತಹ ಶಕ್ತಿಯುಳ್ಳದ್ದಾಗಿ, ಸತ್ವಗುಣದಿಂದ ಕೂಡಿ, ದಪ್ಪದಾದ ಕಾಲುಗಳಿದ್ದು, ದೃಢವಾದ ಕುಕ್ಷಿಯನ್ನು ಹೊಂದಿ, ಕಪ್ಪು ಬಣ್ಣದಿಂದ ಕೂಡಿರುತ್ತದೆ. ಕಡೆಗಣ್ಣು ಉದ್ದವಾಗಿ, ವಿಕಾರವಾಗಿಯೂ ಇರುತ್ತದೆ. ಮೋಡವು ಗುಡುಗಿದಾಗ, ಆನೆಯು ಘೇಂಕರಿಸಿದಾಗಲೂ ಬೆದರುವುದಿಲ್ಲ, ಕ್ಷಮಿಸುವಂತಹ ಗುಣವನ್ನು ಹೊಂದಿರುತ್ತದೆ. ಸಿಂಹದಂತೆ ಕಾಣುವ, ದರ್ಪದಿಂದ ಕೂಡಿದ, ಅಗ್ನಿಗೆ ಸಮನಾದ ತೇಜಸ್ಸುಳ್ಳ, ರಥಕ್ಕೆ ಹಾಗೂ ಯಂತ್ರಗಳಿಗೆ ಕಟ್ಟಲು ಯೋಗ್ಯವಲ್ಲದ, ನರಗಳಿಂದ ಕೂಡಿದ ಶರೀರವುಳ್ಳ, (ಬಡಕಲು ಶರೀರ) ಎಲ್ಲದಕ್ಕಿಂತಲೂ ವೇಗವಾಗಿ ಓಡುವ ಸಾಮರ್ಥ್ಯವುಳ್ಳ, ಕಾಡು, ಪರ್ವತ, ಕೋಟೆಗಳ ಮಧ್ಯದಲ್ಲಿ ಓಡಲು ಇಚ್ಛಿಸದ, ನವಿಲಿನಂತಿರುವ ಕತ್ತುಳ್ಳ, ಹಾಗೂ ಚಿನ್ನದಂತೆ ಹೊಳೆಯುತ್ತಿರುವಂತಹುಗಳು **ವನಾಯುಜ ಕುದುರೆಗಳು.**

**ಗಾಂಧಾರ ಕುದುರೆಗಳು –**

ಗಾಂಧಾರ ದೇಶದ ಕುದುರೆಗಳ ಶರೀರ ಅನೇಕ ಬಣ್ಣಗಳಿಂದ ಕೂಡಿರುತ್ತದೆ. ಸ್ಥಿರವಾದ ಅಂಗಾಂಗಗಳನ್ನು ಹೊಂದಿ ಬಲಿಷ್ಠವಾಗಿರುತ್ತವೆ. ಬಹುಕಾಲ ಸೊಕ್ಕಿನಿಂದ ಕೂಡಿರುತ್ತವೆ. ನಂತರ ವಯೋಗುಣಕ್ಕೆ ಅನುಗುಣವಾಗಿ ಶರೀರದಲ್ಲಿ ವ್ಯತ್ಯಾಸವಾಗುತ್ತದೆ (ಏರುಪೇರಾಗುತ್ತದೆ).

**ಆರಟ್ಟಜಕುದುರೆಗಳು –**

ಆರಟ್ಟ ದೇಶದಲ್ಲಿ ಹುಟ್ಟಿದ ಕುದುರೆಗಳು ಸುಂದರವಾದ ಕಟಿಪ್ರದೇಶವನ್ನು ಹೊಂದಿರುತ್ತವೆ. ಉದ್ದವಲ್ಲದ ಬೆನ್ನು, ಕರುಳುಗಳನ್ನು ಹೊಂದಿ ಬಲಶಾಲಿ-ಯಾಗಿರುತ್ತವೆ. ದಪ್ಪವಾದ ಕಣ್ಣಿನ ತುದಿ ಮತ್ತು ಚರ್ಮವನ್ನು ಹೊಂದಿ ತೇಜಸ್ಸಿನಿಂದ ಕೂಡಿರುತ್ತವೆ. ಶಕ್ತಿಯುತವಾಗಿದ್ದು ವೇಗವಾಗಿ ಓಡುವ ಕುದುರೆಗಳಾಗಿರುತ್ತವೆ.

**ಸೈಂಧವ ಕುದುರೆಗಳು –**

ಸೈಂಧವ ದೇಶದ ಕುದುರೆಗಳು ಬಲಶಾಲಿಯಾಗಿದ್ದು ದೃಢವಾದ ಮಂಡಿಯನ್ನು ಹೊಂದಿರುತ್ತವೆ. ವಿಶಾಲವಾದ ಎದೆ, ದೊಡ್ಡ ಮೂಗು, ತೆಳುವಾದ ಕಟಬಾಯಿ, ಚರ್ಮದಿಂದ ಕೂಡಿ, ಜೋತಾಡುವ ಅಂಡಕೋಶ ಮತ್ತು ಜನನೇಂದ್ರಿಯವನ್ನು ಹೊಂದಿರುತ್ತವೆ.

**ತೈತ್ತಜ ಕುದುರೆಗಳು –**

ಉದ್ದವಾದ ಕತ್ತು, ಮುಖ, ದಪ್ಪವಾದ ಕಣ್ಣು ಹಾಗೂ ದೊಡ್ಡ ಶರೀರವನ್ನು ಹೊಂದಿದ್ದರೆ ಅವುಗಳನ್ನು ತೈತ್ತಜ ಕುಲದ ಕುದುರೆಗಳೆನ್ನುತ್ತಾರೆ. ಈ ಕುದುರೆಗಳು

ವೇಗವಾಗಿ ಓಡುತ್ತವೆ ಹಾಗೂ ದಪ್ಪವಾದ ದವಡೆ, ಕತ್ತು, ಅಂಡಕೋಶ ಹಾಗೂ ಜನನೇಂದ್ರಿಯವನ್ನು ಹೊಂದಿರುತ್ತವೆ.

**ಕುಲಜ ಕುದುರೆಗಳು –**

ವಿಶಾಲವಾದ ಎದೆ ಕಟಿಪ್ರದೇಶ, ಕಣ್ಣುಗಳಿಂದ ಕೂಡಿದ ಭಾರವನ್ನು ಹೊರುವ, ಮಾರ್ಗಾಯಾಸವನ್ನು ಸಹಿಸಿಕೊಳ್ಳುವ, ಒಳ್ಳೆಯ ಶರೀರವುಳ್ಳ, ದುಂಡಾದ ಕತ್ತುಳ್ಳ, ಉದ್ದವಾದ ಮುಖವುಳ್ಳ ಮತ್ತು ಬಾಲವುಳ್ಳ ಕುದುರೆಯನ್ನು ಕುಲಜಕುದುರೆಯೆನ್ನುತ್ತಾರೆ.

**ಉಪಕುಲಜ ಕುದುರೆಗಳು –**

ತೆಳುವಾದ ರೋಮ, ಚರ್ಮ ಮತ್ತು ಕೂದಲುಳ್ಳ ದುಂಡಾಗಿರುವ ಸೊಂಟ, ಎದೆ ಮತ್ತು ಕರುಳುಗಳನ್ನುಳ್ಳ, ಹಾಗೂ ಕುಲಜ ಕುದುರೆಗಳಿಗೆ ಸಮಾನವಾದ ಲಕ್ಷಣವನ್ನು ಹೊಂದಿದ್ದು, ಸ್ವಲ್ಪ ಉದ್ದವಾದ ಶರೀರವನ್ನು ಹೊಂದಿರುವ ಕುದುರೆಗಳನ್ನು ಉಪಕುಲಜವೆನ್ನುತ್ತಾರೆ.

**ಮೇಚಕ ಕುದುರೆಗಳು –**

ಹೆಚ್ಚು ಸಂಚರಿಸದ (ಬಹಳ ದೂರ ಸಂಚಾರ ಮಾಡದ) ಕಡಿಮೆ ಬಲವನ್ನು ಹೊಂದಿರುವ, ಭಾರವನ್ನು ಹೊರುವ, ವಿಚಿತ್ರ ಬಣ್ಣಗಳಿರುವ, ಮೇಚಕ ಕುಲದಲ್ಲಿ ಹುಟ್ಟಿರುವ ಕುದುರೆಗಳು ಉದ್ದವಾದ ಕತ್ತು, ವಿಶಾಲವಾದ ವಕ್ಷಸ್ಥಳ ಹಾಗೂ ಎತ್ತರವಾದ ನಿಲುವನ್ನು ಹೊಂದಿರುತ್ತವೆ.

ಒಳ್ಳೆಯ ಲಕ್ಷಣದಿಂದ ಕೂಡಿದ ಮುಖವುಳ್ಳ, ಒಳ್ಳೆಯ ಬಣ್ಣದಿಂದಿರುವ ಬೆನ್ನು, ಬಾಲ ಶಂಖಾಕಾರದ ಕಿವಿಗಳು ತೆಳುವಾದ ಶರೀರ ಚಿಕ್ಕದಾದ ಹುಬ್ಬಿನ

ಮಧ್ಯಭಾಗ ಮತ್ತು ಗೊರಸುಳ್ಳ, ವಿಶಾಲವಾದ ಕಟಿಪ್ರದೇಶವುಳ್ಳ ಕುದುರೆಯನ್ನು ಮೇಚಕ ಕುದುರೆ ಎನ್ನುತ್ತಾರೆ.

**ಉಪಮೇಚಕ ಕುದುರೆಗಳು –**

ವಿಶಾಲವಾದ ಕಾಕಸವುಳ್ಳ, ಕೀರಲು ಧ್ವನಿ ಇಲ್ಲದ, ಮಧ್ಯಭಾಗದಲ್ಲಿ ಜನನೇಂದ್ರಿಯದಿಂದ ಕೂಡಿದ ಕುದುರೆಗಳು ಉಪಮೇಚಕ ಎನಿಸುತ್ತವೆ. ಇವುಗಳ ತಲೆ, ಕುತ್ತಿಗೆಯಲ್ಲಿರುವ ರೋಮಗಳು ಒತ್ತಾಗಿರುತ್ತವೆ.

**ತ್ರೈಗರ್ತ ಕುದುರೆಗಳು –**

ಮೃದುವಾದ ಅವಯವವುಳ್ಳ, ಕತ್ತಿನ ಸುತ್ತಲೂ ಸುಂದರವಾದ ಕೂದಲುಳ್ಳ, ಒಳ್ಳೆಯ ಕರುಳುಳ್ಳ, ಕೆಟ್ಟ ಮುಖವುಳ್ಳ ಇವು ಬಿಳುಪಾದ ಮುಖ, ಬಾಲವನ್ನು ಹೊಂದಿ, ಹೆಚ್ಚಾದ ಕೇಸರದಿಂದ ಕೂಡಿ, ಬಿಳುಪಾದ ಮೂಗನ್ನು ಹೊಂದಿರುವ ಕುದುರೆಗಳನ್ನು ತ್ರೈಗರ್ತ ಎಂದು ಕರೆಯುತ್ತಾರೆ, ಇಂತಹ ಕುದುರೆಗಳನ್ನು ಹತೋಟಿಯಲ್ಲಿಡುವುದು ಕಷ್ಟಸಾಧ್ಯ.

**ಗೌಥೇಯ ಕುದುರೆಗಳು –**

ದೃಢವಾದ ಪಾದಗಳುಳ್ಳ, ಭಯಂಕರವಲ್ಲದ ಬಿಳಿಬಣ್ಣದಿಂದ ಕೂಡಿದ ಮಂಗಳಕರವಾದ ಕುದುರೆಗಳನ್ನು ಗೌಥೇಯ ಎನ್ನುತ್ತಾರೆ. ಭಾರವನ್ನು ಹೊರುವ ಸಾಮರ್ಥ್ಯವುಳ್ಳ, ಗಟ್ಟಿಯಾದ ಗೊರಸುಳ್ಳ, ದುಂಡಾದ, ಉದ್ದವಾದ ದಪ್ಪದಾದ ಕತ್ತುಳ್ಳ ಕುದುರೆ ಇವಾಗಿರುತ್ತವೆ.

**ಸಾವಿತ್ರೇಯ ಕುದುರೆಗಳು –**

ಲಕ್ಷಣವಾದ ಉದ್ದವಾದ ಮುಖವುಳ್ಳ, ಭಯಂಕರವಾದ ಶರೀರವುಳ್ಳ, ಸೂಕ್ಷ್ಮವಾದ ರೋಮವುಳ್ಳ ಸಾವಿತ್ರೇಯ ಕುದುರೆಗಳು ಹುಲ್ಲನ್ನು

ತಿನ್ನುವುದರಲ್ಲಿಯೇ ಆಸಕ್ತಿಯುಳ್ಳ ಮತ್ತು ಧೈರ್ಯಶಾಲಿಗಳಾದ ಕುದುರೆಗಳು. ಮೃದುವಾದ ಅವಯವ, ವಿಶಾಲವಾದ ಪಾದ, ದೊಡ್ಡ ಹೊಟ್ಟೆ, ಪ್ರಶಾಂತತೆ, ಮಂಗಳಕರವಾದ ಚಿಹ್ನೆಗಳಿಂದ ಕೂಡಿದ ಎದೆ, ಉದ್ದವಾದ ಬೆನ್ನು, ಗಟ್ಟಿಯಾದ ಮಾಂಸಖಂಡ, ಉದ್ದವಾದ ಕೂದಲು ಮತ್ತು ಬಾಲವುಳ್ಳ ಕುದುರೆಗಳನ್ನು ಸಾವಿತ್ರೇಯ ಕುದುರೆಗಳು ಎನ್ನುತ್ತಾರೆ.

**ಯವನ ಕುದುರೆಗಳು –**

ಮಂಗಳಕರವಾದ, ಸುಂದರವಾದ ಕಣ್ಣು ಮತ್ತು ಕಪೋಲ, ಕೃಶವಾದ ದವಡೆ ಮತ್ತು ಬಾಯಿ, ಈ ರೀತಿಯಾದ ಲಕ್ಷಣಗಳಿಂದ ಕೂಡಿರುವ ಕುದುರೆಗಳನ್ನು ಯವನ ದೇಶದ ಕುದುರೆಗಳು ಎನ್ನುತ್ತಾರೆ. ಇವುಗಳು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ.

ಈ ಕುದುರೆಗಳಿಗೆ ವಿಶಾಲವಾದ ದೊಡ್ಡದಾದ ಎದೆ, ಹಣೆ ಮತ್ತು ಕಣ್ಣುಗಳಿರುತ್ತವೆ. ಉದ್ದವಾದ ಕರುಳು, ಗಟ್ಟಿಯಾದ ಗೊರಸು, ನಿಧಾನವಾಗಿ ಚಲಿಸುವ, ಮಂಗಳಕರವಾದ, ಆಪ್ಯಾಯಮಾನವಾದ ರೂಪ, ಒಳ್ಳೆಯ ಬಣ್ಣ, ಲಕ್ಷಣವಾದ, ಉದ್ದವಾದ, ಕೃಶವಾದ ಅಥವಾ ದೊಡ್ಡ ಶರೀರವನ್ನು ಹೊಂದಿರುವ, ತೇಜಸ್ವಿಯಾದ, ಸತ್ತ್ವಯುತವಾದ, ತೆಳ್ಳನೆಯ ಚರ್ಮ ಹಾಗೂ ಸೂಕ್ಷ್ಮವಾದ ರೋಮಗಳಿರುವ ಇವುಗಳನ್ನೂ ಯವನ ಕುದುರೆಗಳೆನ್ನುತ್ತಾರೆ.

**ತರ್ಜಿತ ಕುದುರೆಗಳು –**

ಹಿಂದೆ ಮಧು ಎಂಬ ರಾಕ್ಷಸನಿಂದ ಹೆದರಿಸಲ್ಪಟ್ಟು ಕುದುರೆಗಳು ಸಮುದ್ರಗಳಲ್ಲಿ, ದ್ವೀಪಗಳಲ್ಲಿ, ಸಂಚರಿಸುತ್ತಿದ್ದವು. ಅಂತಹ ಕುದುರೆಗಳು ಸಮುದ್ರಗಳನ್ನು ದಾಟಿ, ಯವನದೇಶಕ್ಕೆ ಹೋಗಿ ತಮ್ಮ ಸಂತತಿಯನ್ನು

ವೃದ್ಧಿಗೊಳಿಸುತ್ತವೆ. ತೇಜಸ್ಸಿನಿಂದ ಕೂಡಿದ ತರ್ಜಿತ ಎಂಬ ಕುದುರೆಗಳು ಅನುಗುಣವಾದ ರೂಪ ಹೊಂದಿದ್ದು ವೇಗವಾಗಿ ಓಡುವಂತಹ ಕುದುರೆ- ಗಳಾಗಿರುತ್ತವೆ. ಸ್ವಾಭಾವಿಕವಾಗಿಯೇ ಪಿತ್ತದೋಷಗಳಿಂದ ಕೂಡಿದ ಇವುಗಳಿಂದ ಹುಟ್ಟಿದ ಕುದುರೆಗಳು ಒಳ್ಳೆಯ ಆಕಾರವನ್ನು ಹೊಂದಿರುತ್ತವೆ.

**ಅರ್ಜುನಾಶ್ವ ಕುದುರೆಗಳು –**

ದೊಡ್ಡ ಹೊಟ್ಟೆ, ಜೋತಾಡುವ ಅಂಡಕೋಶ, ಶುಭ್ರವಾದ, ಎತ್ತರ ತಗ್ಗಿನಿಂದ ಕೂಡಿದ ಹೆಗಲು, ಕತ್ತುಗಳಿಂದ ಕೂಡಿದ ಶರೀರವುಳ್ಳ, ಚಿಕ್ಕದಾದ ಬೆನ್ನನ್ನು ಹೊಂದಿರುವ ಕುದುರೆಗಳನ್ನು ಅರ್ಜುನಾಶ್ವ ಎಂದು ತಿಳಿಯಬೇಕು.

**ಹ್ರಸ್ವಯವನ ಕುದುರೆಗಳು –**

ಚಿಕ್ಕದಾದ ಅವಯವಗಳು, ಸುಂದರವಾದ ಶರೀರ, ಒಳ್ಳೆಯ ಸಾಮರ್ಥ್ಯ, ಒಳ್ಳೆಯ ವೇಗ, ಮಂಗಳಕರವಾದ ರೋಮ, ಬಾಲ, ಹಾಗೂ ಕೂದಲು. ಸುಂದರವಾಗಿ ಕಾಣುವ ಒಳ್ಳೆಯ ಜನನೇಂದ್ರಿಯ ಹಾಗೂ ಒಳ್ಳೆಯ ಆಕಾರವನ್ನು ಹೊಂದಿರುವ ಕುದುರೆಗಳನ್ನು ಹ್ರಸ್ವಯವನ ಎನ್ನುತ್ತಾರೆ.

**ತುಷಾರ ಕುದುರೆಗಳು –**

ಸುಂದರವಾದ, ಆಪ್ಯಾಯಮಾನವಾದ, ತೇಜಸ್ವಿಯಾದ, ವೇಗವಾಗಿ ಓಡುವ ಮತ್ತು ಬಲಶಾಲಿಯಾದ ಕುದುರೆಗಳು ತುಷಾರ ಕುದುರೆಗಳೆನಿಸುತ್ತವೆ. ಇವುಗಳು ಅತ್ಯಂತ ವೇಗವಾಗಿ ಓಡುವುದಾಗಿದ್ದು, ಅಧಿಕ ಬಲವನ್ನು, ದೊಡ್ಡ ಶರೀರವನ್ನು ಹೊಂದಿರುತ್ತವೆ. ಇವು ಭಾರವನ್ನು ಹೊರುವ, ಮಾರ್ಗಾಯಾಸದಿಂದ ಬಳಲದಿರುವ, ತನ್ನಿಚ್ಛೆ ಬಂದಂತೆ ಸಂಚರಿಸುವ, ದೊಡ್ಡ ಹೊಟ್ಟೆಯುಳ್ಳ, ದಪ್ಪದಾದ

ಮಾಂಸಖಂಡಗಳಿಂದ ಕೂಡಿದ, ಒಳ್ಳೆಯ ನಡತೆಯುಳ್ಳ, ಶಕ್ತಿಯುತವಾದ ಮತ್ತು ಅಭಿಮಾನವುಳ್ಳ ಕುದುರೆಗಳಾಗಿರುತ್ತವೆ.

**ಕಾದರೇಯ ಕುದುರೆಗಳು –**

ವಿಶಾಲವಾದ ಕಟಿಪ್ರದೇಶ, ಬಲಿಷ್ಠವಾದ ಕಾಲುಗಳು, ಒಳ್ಳೆಯ ಕರುಳು, ಮಂಗಳಕರವಾದ ಗೊರಸುಗಳಿಂದ ಕೂಡಿರುವ ಕುದುರೆಯನ್ನು ಕಾದರೇಯ ಎನ್ನುತ್ತಾರೆ. ಇವುಗಳಿಗೆ ಶಕ್ತಿಯುತವಾದ ಕಾಲುಗಳು ಹಾಗೂ ಸೂಕ್ಷ್ಮವಾದ ಕೂದಲುಗಳಿರುತ್ತವೆ.

**ಪಾರ್ವತೀಯ ಕುದುರೆಗಳು –**

ದಪ್ಪ ಚರ್ಮ, ಒಳ್ಳೆಯ ನಡತೆ, ಒಳ್ಳೆಯ ಕರುಳು, ದುಂಡಾಗಿರುವ ಶರೀರವುಳ್ಳ ಕುದುರೆಯನ್ನು ಪಾರ್ವತೀಯ ಎನ್ನುತ್ತಾರೆ. ಇವುಗಳು ಮುಂಭಾಗದ ಶರೀರವನ್ನು ಹೆಚ್ಚು ಆಶ್ರಯಿಸುತ್ತವೆ.

**ಆವಂತಿ ಕುದುರೆಗಳು –**

ಕುದುರೆಯ ಉತ್ತರಾರ್ಧ ಭಾಗವು ಸಮನಾಗಿರದೆ ಅಂಕುಡೊಂಕಾಗಿರುತ್ತದೆ. ಕೃಶವಾದ ಹೊಟ್ಟೆ, ಚಿಕ್ಕ ಬೆನ್ನು, ದಪ್ಪವಾದ ಅವಯವ, ವಿಶಾಲವಾದ ಎದೆ, ಸೂಕ್ಷ್ಮವಾದ ರೋಮಗಳಿಂದ ಕೂಡಿರುತ್ತವೆ. ಅಶ್ವಶಾಸ್ತ್ರವನ್ನು ಬಲ್ಲವರು ಇಂತಹ ಕುದುರೆಗಳನ್ನು ಅವಂತಿ ದೇಶದ ಕುದುರೆಗಳೆಂದು ಕರೆಯುತ್ತಾರೆ.

**ಕಾಶ್ಮೀರ ಕುದುರೆಗಳು –**

ವಿಶಾಲವಾದ ಎದೆ, ಮಂಡಿ, ಗಟ್ಟಿಯಾದ ಪಾದ, ದೊಡ್ಡ ಹೊಟ್ಟೆ, ನಿರ್ಮಲವಾದ ಕಣ್ಣುಗಳು, ಕತ್ತಿನ ಸುತ್ತಲೂ ಒತ್ತಾದ ಕೂದಲು, ಮತ್ತು ಗಟ್ಟಿಯಾದ ಗೊರಸಿದ್ದರೆ ಅವುಗಳನ್ನು ಕಾಶ್ಮೀರ ಕುದುರೆಗಳೆನ್ನುತ್ತಾರೆ.

**ಕಾನನ ಕುದುರೆಗಳು –**

ಲಕ್ಷಣವಾದ, ಉದ್ದವಾದ ಶರೀರ, ಉದ್ದವಾದ ಬಾಯಿ, ಶಂಖಾಕಾರದ ಕಿವಿಗಳು ಮತ್ತು ಮಂಗಳಕರವಾದ ಮುಖವನ್ನು ಹೊಂದಿರುವ ಕುದುರೆಯನ್ನು ಕಾನನಕುದುರೆ ಎನ್ನುತ್ತಾರೆ. ಇವುಗಳಿಗೆ ಮುಂಭಾಗದ ಶರೀರವು ಸ್ವಲ್ಪ ಮುಂದೆ ಬಂದಿದ್ದು, ಹಿಂದಿನ ಕಾಲನ್ನು ಮೇಲೆತ್ತಿರುತ್ತವೆ. (ಮುನ್ನುಗ್ಗಲು ಸಿದ್ಧವಾಗಿರುವಂತೆ ಕಂಡುಬರುತ್ತವೆ) ಮತ್ತು ಹೆಣ್ಣು ಕುದುರೆಯನ್ನು ನೋಡಿ ಕೆನೆಯುತ್ತವೆ.

**ಉಷ್ಟ್ರ ಕುದುರೆಗಳು –**

ನಯವಾದ ಉದ್ದವಾದ ಎತ್ತರವಾದ ಕತ್ತು, ಒಂಟೆಯ ರೀತಿಯಲ್ಲಿ ಶರೀರ ಮತ್ತು ಮುಖವಿರುವ ಕುದುರೆಯನ್ನು ಉಷ್ಟ್ರಕುದುರೆ ಎನ್ನುತ್ತಾರೆ.

**ಪರ್ವತೀಯ ಕುದುರೆಗಳು –**

ಪರ್ವತೀಯಕುದುರೆಗಳು ಬಲಶಾಲಿಯಾದವುಗಳು, ಇವುಗಳ ಕೂದಲು ಒತ್ತಾಗಿ ವೃತ್ತಾಕಾರದಿಂದಿರುತ್ತವೆ, ಶಕ್ತಿಯುತವಾದ ಕಾಲುಗಳಿದ್ದು ಅತಿ ವೇಗವಾಗಿ ಓಡುವ ಕುದುರೆಗಳೆಂದು ಪ್ರಸಿದ್ಧವಾಗಿವೆ.

ಬೇರೆ ಬೇರೆ ಕುಲದಲ್ಲಿ ಹುಟ್ಟಿದ ಇಪ್ಪತ್ತಾರು ಪ್ರಕಾರದ ಒಳ್ಳೆಯ ಜಾತಿಯ ಕುದುರೆಗಳ ವಿಶೇಷತೆಯನ್ನು ಹೇಳಲಾಗಿದೆ.

ಒಳ್ಳೆಯ ಜಾತಿಯ ಕುದುರೆಗಳಿಗೆ ಧೃಡವಾದ ಕಾಲುಗಳು, ಗಟ್ಟಿಯಾದ ಶರೀರ, ಒಳ್ಳೆಯ ಕಣ್ಣುಗಳು, ಒಳ್ಳೆಯ ಬಣ್ಣ, ಅದಕ್ಕನುಗುಣವಾದ ನಡಿಗೆ, ಚಿಕ್ಕದಾದ ಅಂಡಕೋಶ, ಯುದ್ಧದಲ್ಲಿ ತನ್ನ ಸ್ವಾಮಿಯ ಅಧೀನದಲ್ಲಿರುವ, ಶಕ್ತಿಶಾಲಿಯಾದ, ವೇಗವಾಗಿ ಓಡುವ, ಸತ್ವಗುಣವುಳ್ಳ, ಒಳ್ಳೆಯ ನಡತೆಯುಳ್ಳ,

ದೀರ್ಘಾಯುಷ್ಯದಿಂದ ಕೂಡಿದ, ರೋಗರಹಿತವಾದ, ಕೋಮಲವಾದ ಶರೀರವುಳ್ಳ, ದೊಡ್ಡದಾದ, ಉದ್ದವಾದ, ಮಾಂಸರಹಿತವಾದ ಬಾಯುಳ್ಳ, ಚೆನ್ನಾಗಿ ವಿಭಾಗಿಸಲ್ಪಟ್ಟ ದೇಹವುಳ್ಳ, (ಸುಂದರವಾದ ದೇಹ) ಒಳ್ಳೆಯ ಆಕಾರ, ಚಿಕ್ಕದಾದ ಬೆನ್ನು, ಗೊರಸು, ಕಿವಿಗಳು, ಶಕ್ತಿ, ತೇಜಸ್ಸು ಮತ್ತು ಸತ್ತ್ವಯುತವಾದ ಇಂದ್ರಿಯಗಳುಳ್ಳ, ಹಸಿವು ಬಾಯಾರಿಕೆಯನ್ನು ಸಹಿಸಿ ಭಾರವನ್ನು ಹೊರು-ವಂತಹದ್ದು. ಹೀಗೆ ಒಳ್ಳೆಯ ಶರೀರ, ಆಕಾರ, ಸುವಾಸನೆ, ಸ್ವರ, ಸ್ವಸ್ಥಾನದಲ್ಲಿರುವ ಅವಯವಗಳು, ಲಕ್ಷಣವಾದ, ಸುಂದರವಾದ, ಕಠೋರವಲ್ಲದ, ಕೋಪವನ್ನು ಜಯಿಸಿದ, ಹರಿತವಾದ ಆಯುಧದಿಂದ ಬೇರ್ಪಟ್ಟ ಶರೀರದಿಂದ ಕೂಡಿದ್ದರೂ, ಪ್ರಜ್ಞೆತಪ್ಪದೆ ವಿಚಲಿತವಾಗದೆ ಮುನ್ನುಗ್ಗುತ್ತವೆ, ಇಂತಹ ಕುದುರೆಯನ್ನು (ಮೇಲೆ ಹೇಳಿದ ಲಕ್ಷಣವುಳ್ಳ ಕುದುರೆಗಳನ್ನು) "ಆಜಾನೇಯ ಕುದುರೆ"ಗಳೆನ್ನುತ್ತಾರೆ. ಈ ಕುದುರೆಗಳು ದೇಹದಿಂದ ಹೊರಬಂದ ಕರುಳಿನಿಂದ ಕೂಡಿ ಪ್ರಾಣಹೋಗುವ ಪರಿಸ್ಥಿತಿ ಬಂದರೂ, ಎಲ್ಲಿಯವರೆವಿಗೂ ತನ್ನ ಸ್ವಾಮಿ ಬೆನ್ನ ಮೇಲೆ ಕುಳಿತಿ-ರುತ್ತಾನೊ ಅಲ್ಲಿಯವರೆವಿಗೂ ಪ್ರಾಣಬಿಡುವುದಿಲ್ಲ. ಉಳಿದಂತಹ ಕುದುರೆಯ ಲಕ್ಷಣವನ್ನು ವಿಸ್ತಾರ ಭಯದಿಂದ ಹೇಳಲಾಗಿಲ್ಲ.

ಶಾಲಿಹೋತ್ರಮುನಿಗಳ ಪ್ರಕಾರ ಕಾಂಭೋಜ ಕುದುರೆಯ ಉಪಕುಲಗಳು ವನಾಯುಜ, ಆರಟ್ಟ ಮತ್ತು ಬಾಹ್ಲೀಕ. ವನಾಯುಜದ ಉಪಕುಲ ಗಾಂಧಾರ, ಮತ್ತು ಸೈಂಧವದ ಉಪಕುಲ ತೈತ್ತಿರಾ ಎಂಬಲ್ಲಿಗೆ ಕುಲೋಪಕುಲದ ಲಕ್ಷಣವು ಸಮಾಪ್ತವಾಗಿದೆ.

# 11. ತಾಲುರಂಗಾಧ್ಯಾಯ

**ಅಂಗಳದ ಬಣ್ಣದ ಬಗೆಗೆ ಕೇಳು –**

ಗರ್ಭಸ್ಥವಾದ ಕುದುರೆಗೆ ಯಾವಾಗ ಪಿತ್ತವು ಕೆರಳುತ್ತದೋ ಆವಾಗ ಅದರ ಅಂಗಳು ಅತ್ಯಂತ ಕಪ್ಪು ಬಣ್ಣದಿಂದ ಕೂಡಿರುತ್ತದೆ. ಇದು ಅಮಂಗಳದ ಚಿಹ್ನೆಯೆಂದು ತಿಳಿಯಬೇಕು. ಅಂಗಳಿನ ಬಣ್ಣದ ಆಧಾರದ ಮೇಲೆ ಕುದುರೆಯ ಮಂಗಳ ಮತ್ತು ಅಮಂಗಳ ಫಲವನ್ನು ತಿಳಿಯಬಹುದು.

ಬಿಳಿ, ಹಳದಿ, ಕೆಂಪು, ನೀಲಿ, ಕಪ್ಪು, ಮಿಶ್ರಿತ ಬಣ್ಣ, ಬಿಳುಪಾದ ತಲೆಯ ಆಕಾರ ಹೀಗೆ ಕುದುರೆಗಳಲ್ಲಿ ಏಳು ವಿಧವಾದ ತಾಲುವಿನ ಬಣ್ಣವಿರುತ್ತದೆ. ತಾಲುವಿನ ಬಣ್ಣ ಕೆಂಪಾಗಿದ್ದರೆ ಉತ್ತಮ. ಬೇರೆ ಬಣ್ಣಗಳಿದ್ದರೆ ಅದು ಅಮಂಗಳಕರ. ಬಿಳುಪು ಮುಂತಾದ ಬಣ್ಣಗಳ ಕೆಲವು ವಿಶೇಷತೆಯು ಹೀಗಿದೆ.

ಯಾವ ಕುದುರೆಯ ತಾಲುವಿನ ಬಣ್ಣ ಆರಿದ ಕೆಂಡದಂತೆ ಇರುತ್ತದೋ ಅಂತಹ ಕುದುರೆಯ ಸ್ವಾಮಿಯು ಬಹಳ ಬೇಗನೆ ರಾಜ್ಯವನ್ನು ರಾಷ್ಟ್ರವನ್ನು ಕಳೆದುಕೊಳ್ಳುತ್ತಾನೆ. ಅರ್ಧ ಕಪ್ಪಾಗಿದ್ದರೆ ಸ್ವಾಮಿಯ ಮರಣ ಹಾಗೂ ಮಗನನ್ನು ಕಳೆದುಕೊಳ್ಳುತ್ತಾನೆ. ಸ್ವಲ್ಪ ಕಪ್ಪಾಗಿದ್ದರೆ ಅಪಜಯವನ್ನು ಹೊಂದುತ್ತಾನೆ, ತಾಲುವಿನ ಮಧ್ಯಭಾಗ ಮಾತ್ರ ಕಪ್ಪಾಗಿದ್ದು ಕಟ್ಟಲ್ಪಟ್ಟಂತೆ ಕಂಡರೆ ಅಂತಹ ಕುದುರೆಯುಳ್ಳ ಸ್ವಾಮಿಗೆ ತೊಂದರೆ ಉಂಟಾಗುತ್ತದೆ. ಕಪ್ಪು ಚುಕ್ಕಿಗಳಿರುವ ಎರಡು ಅಥವಾ ಮೂರು ಬಣ್ಣಗಳಿಂದ ಕೂಡಿ, ವಿಚಿತ್ರವಾಗಿರುವ ತಾಲುಗಳಿಂದ ಕೂಡಿದ ಕುದುರೆಯುಳ್ಳ ಸ್ವಾಮಿಗೆ ಅಮಂಗಳವು ಉಂಟಾಗುತ್ತವೆ.

ದೀಪ, ಅಗ್ನಿ, ಆಗತಾನೆ ಉದಯಿಸಿದ ಸೂರ್ಯ, ತಾವರೆಯ ದಳ ಇವುಗಳಂತೆ ಕೆಂಪಾದ, ತಾಲುವಿದ್ದು, ಗಂಭೀರವಾದ, ಸ್ನಿಗ್ಧವಾದ ಶರೀರದಿಂದ ಕೂಡಿದ್ದರೆ ಅಂತಹ ಕುದುರೆಯು ಶುಭವೆಂದು ತಿಳಿಯಬೇಕು.

**ಶಾಲಿಹೋತ್ರನ ಪ್ರಕಾರ –**

ಒಂದೇ ಬಣ್ಣದಿಂದ ಇರುವ ತಾಲುವಿದ್ದರೆ ಅದು ದೋಷಯುಕ್ತವಾದುದಲ್ಲ. ಆದರೆ ಅದಕ್ಕೆ ಅಲ್ಪ ಫಲವಿರುತ್ತದೆ ಹಾಗೂ ಕಲೆಸಹಿತವಾದ ಕಪ್ಪು ಬಣ್ಣದಿಂದ ಕೂಡಿದ್ದರೆ ಅಂತಹ ತಾಲುವು ದೋಷಯುಕ್ತವಾದುದು.

## 12. ಕುದುರೆಯ ಬಣ್ಣಗಳ ಲಕ್ಷಣ

ಕುದುರೆಯ ದೇಹದ ಬಣ್ಣಗಳು ಬಿಳುಪು, ಕೆಂಪು, ಕಪ್ಪು ಮತ್ತು ಹಸಿರು ಎಂಬುದಾಗಿ ನಾಲ್ಕು ರೀತಿಯಲ್ಲಿ ಇರುತ್ತವೆ. ಇವುಗಳ ಜೊತೆಗೆ ಮಿಶ್ರಿತ ಬಣ್ಣಗಳು ಸೇರಿ ಒಟ್ಟು ಐದು ಪ್ರಕಾರವಾಗಿರುತ್ತವೆ.

**ಕುದುರೆಯ ಬಣ್ಣಗಳ ಪರಿಚಯ –**

ಕುದುರೆಯ ದೇಹದಲ್ಲಿನ ರೋಮ (ಮೈಮೇಲಿನ ಕೂದಲು) ಕೇಸರ (ಹೆಗಲ ಮೇಲಿನ ಕೂದಲು) ಹಾಗೂ ಬಾಲ ಒಂದೇ ಬಣ್ಣದಿಂದ ಕೂಡಿದ್ದರೆ ಅಂತಹ ಕುದುರೆಯನ್ನು "ಸಮಾನವರ್ಣ"ದ ಕುದುರೆಯೆಂದು ತಿಳಿಯಬೇಕು. ವಜ್ರ, ಹಾಲು, ಚಂದ್ರ, ಶಂಖ, ಬೆಳ್ಳಿ, ಹಿಮ ಇವುಗಳಂತೆ ಬೆಳ್ಳಗಿದ್ದರೆ ಅವುಗಳನ್ನು ಬಿಳಿಯ ಬಣ್ಣದ ಕುದುರೆಗಳೆಂದು ತಿಳಿಯಬೇಕು. ಹಸಿಯಾದ ಅಗರು, ದಾಳಿಂಬೆ ಹೂವಿನಂತೆ ಕೆಂಪಾದ ಬಣ್ಣದಿಂದ ಇರುವ ಕುದುರೆಗಳನ್ನು ಕೆಂಪು ಬಣ್ಣದ ಕುದುರೆಗಳೆಂದು ತಿಳಿಯಬೇಕು.

ಕಾಡಿಗೆ (ಕಣ್ಣಿಗೆ ಹಾಕುವ ಕಪ್ಪು) ಕೋಗಿಲೆ, ಕಪ್ಪಾದ ಮೋಡ, ದುಂಬಿ, ಕರಿನಾಗ ಇವುಗಳಂತೆ ಕಪ್ಪಾದ ಬಣ್ಣದಿಂದ ಕೂಡಿರುವ ಕುದುರೆಗಳನ್ನು ಕಪ್ಪು ಬಣ್ಣದ ಕುದುರೆಗಳೆಂದು ತಿಳಿಯಬೇಕು. ಚಿನ್ನದಂತೆ ಪ್ರಜ್ವಲಿಸುವ, ಅಗ್ನಿಯ ಜ್ವಾಲೆಯಂತೆ ಹೊಳೆಯುವ, ಗೋರೋಚನದ ಬಣ್ಣದಂತೆ ಇರುವ ಕುದುರೆಗಳನ್ನು ಚಿನ್ನದ ಬಣ್ಣದ ಕುದುರೆಗಳೆಂದು ತಿಳಿಯಬೇಕು. ಮೇಲೆ ಹೇಳಿದ ಕುದುರೆಗಳು ಶುದ್ಧವಾದ ಒಂದೇ ಬಣ್ಣದ ಕುದುರೆಗಳು. ಒಂದೇ ಬಣ್ಣದ ಭೇದಗಳು ಮಿಶ್ರಿತವಾಗಿದ್ದರೆ ಆ ಕುದುರೆಗಳು ಅನುವರ್ಣದ ಕುದುರೆಗಳು. ಬೇರೆಬೇರೆ ಬಣ್ಣದ ಚುಕ್ಕಿಗಳನ್ನುಳ್ಳ ಕುದುರೆಗಳು ಸಾರಕುದುರೆಗಳು ಎಂದು ತಿಳಿಯಬೇಕು.

**ಅನುವರ್ಣದ ತಿಳುವಳಿಕೆ –**

ಕುದುರೆಯ ಪೂರ್ವಭಾಗದಲ್ಲಿ ಒಂದು ಬಣ್ಣದಿಂದ ಕೂಡಿದ್ದು ಅನಂತರದಲ್ಲಿ ಮತ್ತೊಂದು ಬಣ್ಣವಿದ್ದರೆ ಅಥವಾ ಬೇರೆ ಬೇರೆ ಬಣ್ಣಗಳಿಂದ ಕೂಡಿದ್ದರೆ ಅಂತಹ ಕುದುರೆಗಳನ್ನು ಅನುವರ್ಣದ ಕುದುರೆಗಳೆಂದು ತಿಳಿಯಬೇಕು. ಒಂದು ಎರಡು ಅಥವಾ ಮೂರು ಸಮಾನ ಬಣ್ಣಗಳಿಂದ ಕೂಡಿ, ಮಿಶ್ರಿತ ಬಣ್ಣಗಳಿಂದ ಕೂಡಿರುವ ಚುಕ್ಕೆಗಳಿದ್ದರೆ ಅದನ್ನು ಚಿತ್ರ ಕುದುರೆಗಳೆಂದು ತಿಳಿಯಬೇಕು. ಬಿಳಿಯ ಬಣ್ಣ ಬಿಟ್ಟು ಬೇರೆ ಬಣ್ಣಗಳ ಚುಕ್ಕಿಗಳಿಂದ ಕೂಡಿರುವ ಕುದುರೆಯು ಸಾರಕುದುರೆ ಎನಿಸುತ್ತದೆ.

**ಕರ್ಕಕುದುರೆ –**

ಕರ್ಕಕುದುರೆಯ ಚರ್ಮ, ಕಣ್ಣು ಅದರ ಶರೀರ, ಜನನೇಂದ್ರಿಯ, ಅಂಡಾಶಯ, ಅಂಡಕೋಶ, ಗೊರಸು, ಗುದದ್ವಾರ, ಮೂಗು ಇವುಗಳು ತಾವರೆಯ ಬಣ್ಣಕ್ಕೆ ಸಮಾನವಾದ ಬಣ್ಣದಿಂದ ಕೂಡಿರುತ್ತವೆ. ಕರ್ಕ ಹೆಸರಿನ ಕುದುರೆಯ ಶರೀರದ ಮೇಲಿನ ರೋಮಗಳು ಮತ್ತು ಬಾಲದ ರೋಮಗಳು

ತಾವರೆಯ ಹೂವಿನ ಶಲಾಕದಂತೆ ನುಣುಪಾಗಿ ಬೆಳ್ಳಗೆ ಇರುತ್ತವೆ. ಹಾಗೆಯೇ ಕೆಲವೊಂದು ಕರ್ಕಕುದುರೆಗಳು ಕೆಂಪು ಬಣ್ಣದಿಂದಿದ್ದು ಅವುಗಳ ದವಡೆ ಮತ್ತು ವೃಷಣ ಹಿಪ್ಪೆ ಹೂವಿನ ಕಾಂತಿಯ ಬಣ್ಣವನ್ನು ಪಡೆದಿರುತ್ತವೆ. ಮತ್ತೆ ಕೆಲವರು ಈ ಕುದುರೆಯ ಚರ್ಮವು ಕೆಂಪಾಗಿದ್ದು ಕಣ್ಣುಗಳು ಬೆಳ್ಳಗಿರುತ್ತವೆ ಎಂದು ಹೇಳಿದ್ದಾರೆ.

ಕುಕ್ಕುಟಕುದುರೆ –

ಕರ್ಕ ಜಾತಿಯ ಕುದುರೆಗಳಲ್ಲಿ ಕೆಲವು ಕುದುರೆಗಳ ಹೊಟ್ಟೆಯ ಭಾಗ, ಮೂಗು, ಕಣ್ಣು, ಬಾಯಿ ಮತ್ತು ಹಲ್ಲುಗಳು ಕಪ್ಪು ಅಥವಾ ಕೆಂಪು ಬಣ್ಣದವುಗಳಾಗಿದ್ದರೆ ಅಂತಹ ಕುದುರೆಯನ್ನು ತಿಳಿದವರು ಕುಕ್ಕುಟ ಹೆಸರಿನ ಕುದುರೆ ಎಂದು ತಿಳಿಸಿದ್ದಾರೆ.

ಕ್ರೌಂಚಪತ್ರಕುದುರೆ –

ಯಾವ ಕುದುರೆಯ ದೇಹದ ರೋಮಗಳು ಮತ್ತು ಬಾಲದ ಕೇಶಗಳು ಬೆಳ್ಳಗಿರುತ್ತವೋ, ಚರ್ಮ, ಜನನೇಂದ್ರಿಯ, ಕಣ್ಣು, ತುಟಿ, ಗೊರಸುಗಳು ಕಪ್ಪಾಗಿರುತ್ತವೋ ಅಂತಹ ಕುದುರೆಯನ್ನು ಅಶ್ವವಿದ್ಯೆಯನ್ನು ಬಲ್ಲ ಋಷಿಗಳು ಕ್ರೌಂಚಪತ್ರಕುದುರೆಯೆಂದು ಹೇಳಿದ್ದಾರೆ.

ಸಿಂಧುವಾರಕ ಕುದುರೆ –

ಯಾವ ಕುದುರೆಯ ಚರ್ಮ, ರೋಮಕೂಪ, ಬಾಲದ ಕೇಶ, ಗುಹ್ಯಪ್ರದೇಶ, ಕಣ್ಣುಗಳು, ಗೊರಸುಗಳು ಸಿಂಧುವಾರವೆಂಬ ಹೂವಿನ ಬಣ್ಣದಂತೆ (ಲಕ್ಕಿ ಹೂವಿನ) ಬಣ್ಣ ಹೊಂದಿರುತ್ತವೋ ಅಂತಹ ಕುದುರೆಯನ್ನು ಅಶ್ವವಿದ್ಯಾ ಪ್ರವೀಣರಾದ ಮುನಿಗಳು ಸಿಂಧುವಾರಕವೆಂಬ ಹೆಸರಿನ ಕುದುರೆ ಎಂದು ತಿಳಿಸಿದ್ದಾರೆ.

**ಸಿಂಹಾಶ್ವ –**

ಕೆಂಪು ಬಣ್ಣದ ಚರ್ಮ, ಅಚ್ಚ ಕೆಂಪು ಬಣ್ಣದ ಅಂಡಕೋಶಗಳು ಹಾಗೂ ಮುಖ, ಸಿಂಹದ ಮೈಗೂದಲಿನಂತಿರುವ ರೋಮಗಳು, ಬಿಳಿಯ ಬಣ್ಣದ ಬಾಲ ಹಾಗೂ ತಲೆಗೂದಲನ್ನು ಹೊಂದಿರುವ ಕುದುರೆಯನ್ನು ಸಿಂಹಕುದುರೆ ಎಂದು ಕರೆಯುತ್ತಾರೆ.

**ವೃಷಗೌರಾಶ್ವ –**

ಯಾವ ಕುದುರೆಯ ದೇಹ ಕೆಂಪು ಬಣ್ಣ, ಕನ್ನೈದಿಲೆಯಂತೆ ಕಪ್ಪು ಬಣ್ಣ, ಮತ್ತು ಹಳದಿ ಬಣ್ಣ ಈ ಮೂರೂ ಬಣ್ಣಗಳಿಂದ ಮಿಶ್ರಿತವಾದ ಕೆಂಪು ಬಣ್ಣದಿಂದ ಕೂಡಿದ ಚರ್ಮವನ್ನು ಹೊಂದಿರುತ್ತದೋ ಅಂತಹ ಕುದುರೆಯನ್ನು **ಗೌರ** ಎಂಬ ಹೆಸರಿನಿಂದ ಕರೆಯುತ್ತಾರೆ. ಬಿಳಿಯ ಕುದುರೆಗೆ ಕಪ್ಪು ಬಣ್ಣ ಮಿಶ್ರಿತವಾಗಿದ್ದರೆ ಅದನ್ನು **ವೃಷಗೌರ** ಕುದುರೆಯೆಂದು ಕರೆಯುತ್ತಾರೆ.

ಬೇರೆ ಬೇರೆ ದೇಹಬಣ್ಣವುಳ್ಳ ಕುದುರೆಗಳ ಕೇಶ ಮಾತ್ರ ಬಿಳುಪಾಗಿದ್ದರೆ ಅಂತಹ ಕುದುರೆಗಳನ್ನು **ಮುಂಜಕೇಶ** ಕುದುರೆಗಳೆಂದು ಕರೆಯುತ್ತಾರೆ. ಬೇರೆ ಬೇರೆ ದೇಹ ಬಣ್ಣವುಳ್ಳ ಕುದುರೆಗಳ ಕೇಶ ಮಾತ್ರ ಕಪ್ಪಾಗಿದ್ದರೆ ಅಂತಹ ಕುದುರೆಗಳನ್ನು **ಅಂಜನಕೇಶ** ಕುದುರೆಗಳೆಂದು ಕರೆಯುತ್ತಾರೆ. ತಲೆಗೂದಲು ಅನೇಕ ಬಣ್ಣಗಳಿಂದ ಕೂಡಿದ್ದರೆ ಆ ಕುದುರೆಯನ್ನು **ಮಿಶ್ರಕೇಶಕ** ಕುದುರೆಯೆಂದು ಕರೆಯುತ್ತಾರೆ. ಹಾಗೆಯೇ ಅನೇಕ ಬಣ್ಣಗಳಿಂದ ಕೂಡಿದ ಬಾಲವಿರುವ ಕುದುರೆಯನ್ನು **ಮಿಶ್ರವಾಲ** ಕುದುರೆಯೆಂದು ಕರೆಯುತ್ತಾರೆ.

ಕುದುರೆಯ ಕಣ್ಣು ಗುಹ್ಯಪ್ರದೇಶ ಕೇಸರ ಕಪ್ಪಾಗಿದ್ದು, ಚರ್ಮ, ಬಾಲ, ಗೊರಸು ಕೆಂಪು ಬಣ್ಣದಿಂದ ಕೂಡಿದ್ದರೆ ಅಂತಹ ಕುದುರೆಗಳನ್ನು **ಕೆಂಪು**

**ಕುದುರೆ** ಎನ್ನುತ್ತಾರೆ. ಈ ಕೆಂಪು ಬಣ್ಣದ ಕುದುರೆಗೆ ಕಪ್ಪು ಬಣ್ಣದ ಬಾಲವಿದ್ದರೆ **ಶೋಣ ಅನುವರ್ಣಕುದುರೆ** ಎಂದು ಹೇಳುತ್ತಾರೆ. ಕುದುರೆಯ ದೇಹವು ಕೆಂಪಾಗಿದ್ದು ಅದರ ರೋಮವು ಬಿಳುಪಾಗಿದ್ದರೆ ಥಾಗೂ ಗೊರಸುಗಳು ಹಾಗೂ ಬಾಲ ಕೆಂಪಾಗಿದ್ದು ಕಣ್ಣುಗಳು ಕಪ್ಪಾಗಿದ್ದರೆ ಅಂತಹ ಕುದುರೆಯನ್ನು **ಶುಕ್ಲರೋಮಕ ಕುದುರೆಗಳೆಂದು** ಬಲ್ಲವರು ಹೇಳಿದ್ದಾರೆ. ಯಾವ ಕುದುರೆಯ ಚರ್ಮ ಮುಂತಾದ ಅವಯವಗಳು ಹೆಚ್ಚಾಗಿ ಕಪ್ಪು ಬಣ್ಣದಿಂದ ಕೂಡಿರುತ್ತದೋ ಅಂತಹ ಕುದುರೆಯನ್ನು **ಕಪ್ಪುಕೂದಲಿನ ಕುದುರೆಗಳೆಂದು** ಬಲ್ಲವರು ಹೇಳಿದ್ದಾರೆ.

**ಮೃದುರೋಮದ ಕುದುರೆ –**

ಕುದುರೆಯ ಚರ್ಮವು ಬಿಳುಪು ಕೆಂಪು ಹಾಗೂ ಕಪ್ಪು ಬಣ್ಣದಿಂದ ಕೂಡಿದ್ದರೆ **ಮೃದುರೋಮದ ಕುದುರೆಗಳೆಂದೂ**, ಕುದುರೆಯ ಶರೀರಧ ಹೆಚ್ಚಿನ ಭಾಗ ಕಪ್ಪಗಿದ್ದು, ಕಣ್ಣುಗಳು ಕಪ್ಪಾಗಿದ್ದರೆ **ಕಪ್ಪು ಕಣ್ಣಿನ ಕುದುರೆಯೆಂದೂ**, ಶರೀರದ ಬಹುಭಾಗ ಬಿಳುಪಾಗಿದ್ದು, ಕಣ್ಣುಗಳೂ ಬಿಳುಪಾಗಿದ್ದರೆ **ಬಿಳಿಕಣ್ಣಿನ ಕುದುರೆಯೆಂದೂ** ತಿಳಿಯಬೇಕು. ಕುದುರೆಯ ಅವಯವವು ಬಿಳಿ, ಕೆಂಪು, ಕಪ್ಪು ಬಣ್ಣಗಳಿಂದ ಕೂಡಿದ್ದು, ಬಾಲ, ಕೇಸರ, ಗೊರಸು, ಕಣ್ಣು ಹಾಗೂ ಚರ್ಮ ಕಪ್ಪಾಗಿದ್ದರೆ ಆ ಕುದುರೆಯನ್ನು **ಪಾಟಲಕುದುರೆ** ಎಂದು ಕರೆಯುತ್ತಾರೆ. ಹಾಗೆಯೇ ಕಪ್ಪು ಚರ್ಮದಿಂದ ಕೂಡಿದ್ದು ಬಿಳಿ ಹಾಗೂ ಕೆಂಪು ಬಣ್ಣದ ಮೈಗೂದಲುಗಳಿಂದ ಕೂಡಿದ್ದರೂ **ಪಾಟಲಕುದುರೆ** ಎಂದೇ ಕರೆಯುತ್ತಾರೆ.

ಬಿಳಿಯ ಬಣ್ಣವೇ ಹೆಚ್ಚಾಗಿರುವ ಕುದುರೆಯನ್ನು **ಸುಮನ (ಸುಂದರ) ಪಾಟಲ ಕುದುರೆಗಳೆನ್ನುತ್ತಾರೆ**. ಹಾಗೆಯೇ ಶರೀರದ ಬಹುಭಾಗ ಕೆಂಪಾಗಿದ್ದು, ಸ್ವಲ್ಪಭಾಗ ಬಿಳುಪಾಗಿದ್ದರೆ ಆ ಕುದುರೆಗಳನ್ನು **ರಕ್ತಪಾಟಲ (ಕೆಂಪು ಪಾಟಲ) ಕುದುರೆಗಳೆನ್ನುತ್ತಾರೆ.**

ಹಳದಿ ಬಣ್ಣದ ಬಾಲವುಳ್ಳ ಕುದುರೆಯನ್ನು ಚಕ್ರವಾಕ ಕುದುರೆ ಎಂದು ಕರೆದಿದ್ದಾರೆ. ಕುದುರೆಯ ಶರೀರವು ಬಿಳಿ ಹಾಗೂ ಹಳದಿ ಬಣ್ಣದಿಂದ ಕೂಡಿ ಹೊಂಬಣ್ಣದಿಂದಿದ್ದರೆ ಸಿದ್ಧಾರ್ಥಕ ಕುದುರೆ ಎಂದೂ, ಕೆಂಪು ಹಳದಿ ಬಣ್ಣಗಳಿಂದ ಕೂಡಿದ್ದರೆ ಕಪಿಲ ಕುದುರೆ ಎಂದೂ ಸ್ವಲ್ಪ ಕಪ್ಪು ಹಾಗೂ ಕೆಂಪು ಬಣ್ಣದಿಂದ ಕೂಡಿದ್ದರೆ ಧೂಮ್ರಬಣ್ಣದ ಕುದುರೆಯೆಂದು ತಿಳಿಯಬೇಕು.

ಯಾವ ಕುದುರೆಯ ಬಾಲ, ಚರ್ಮ ಮತ್ತು ಮೈಗೂದಲು ಬಿಳಿ ಹಳದಿ ಮತ್ತು ಕಪ್ಪು ಬಣ್ಣಗಳ ಮಿಶ್ರಣದಿಂದಾದ ಬಣ್ಣದಿಂದ ಕೂಡಿದ್ದು, ಉಳಿದ ದೇಹವು ಹಳದಿ ಬಿಳಿ ಬಣ್ಣದ ಮಿಶ್ರಣದ ಬಣ್ಣದಂತೆ ಇರುತ್ತದೋ ಅದನ್ನು ಖಂಜರೀಟ ಕುದುರೆಯೆಂದು ಕರೆಯುತ್ತಾರೆ. ಕುದುರೆಯ ರೋಮದ ಕೂಪವು ಬಿಳಿ, ಕೆಂಪು, ಹಳದಿ ಬಣ್ಣದಿಂದ ಕೂಡಿದ್ದು ಚರ್ಮವು ಕೆಂಪು ಬಣ್ಣದಿಂದ ಕೂಡಿದ್ದರೆ ಅಂತಹ ಕುದುರೆಯನ್ನು ಕರಂಟಕಕುದುರೆ ಎಂದೂ ಹಂಸ ಪಕ್ಷಿಯ ಕತ್ತಿನಂತೆ ಕತ್ತಿನ ಬಣ್ಣವಿದ್ದು ಚರ್ಮವು ಕೆಂಪು ಬಣ್ಣದಿಂದ ಕೂಡಿದ್ದರೆ ಅಂತಹ ಕುದುರೆಯನ್ನು ಚಿತ್ರವರ್ಣ (ಕರ್ಬುರ)ಕುದುರೆಯೆಂದು ತಿಳಿಯಬೇಕು.

**ಬಿಳಿಯ ಕುದುರೆಯ ವಿಶೇಷತೆ –**

ಕಾಂತಿಯುತವಾದ, ಸ್ಥಿರವಾದ, ಸ್ನೇಹದಿಂದ ಕೂಡಿದ ಎಲ್ಲಾ ಬಣ್ಣದ ಕುದುರೆಗಳು ಮಂಗಳಕರವಾದವುಗಳು ಅವುಗಳಲ್ಲಿ ಬಿಳಿಯ ಕುದುರೆ ಉತ್ಕೃಷ್ಟವಾದುದು. ಏಕೆಂದರೆ ಬಿಳಿಯ ಕುದುರೆಯು ಶಾರೀರಿಕವಾಗಿ ಸ್ಥಿರವಾಗಿರುತ್ತವೆ ಮತ್ತು ನಾಶವಿಲ್ಲದಂತೆ ಇರುತ್ತವೆ (ಬಹುಕಾಲ ಜೀವಿಸಿರುತ್ತದೆ). ಎಲ್ಲಾ ವರ್ಣಗಳ ಮಧ್ಯೆ ಬಿಳಿಯ ಬಣ್ಣದೊಡನೆ ಮಿಶ್ರಿತವಾದ ಬಣ್ಣದ ಕುದುರೆಯು ಮಂಗಳಕರವಾಗಿರುತ್ತವೆ. ಏಕೆಂದರೆ ಬಣ್ಣಗಳಲ್ಲೆಲ್ಲಾ ಬಿಳಿಯ ಬಣ್ಣವು ಶ್ರೇಷ್ಠವಾದುದರಿಂದ ಬಿಳಿಯ ಬಣ್ಣದ ಕುದುರೆಯು ತುಂಬಾ ಮುಖ್ಯವಾಗಿರುತ್ತವೆ.

ಹೆಚ್ಚು ಹೇಳುವುದೇನು. ಹಿಂದೆ ಹೇಳಿದ ಬೇರೆ ಬೇರೆ ಬಣ್ಣಗಳ ಮತ್ತು ಬೇರೆ ಬೇರೆ ಜಾತಿಯ ಕುದುರೆಗಳಲ್ಲಿ ಉತ್ಕೃಷ್ಟತೆಯನ್ನು ಕೇವಲ ಅವುಗಳ ಹೆಸರಿನಿಂದ ಮಾತ್ರವಲ್ಲದೆ ಅವುಗಳಿಗೆ ಕಟ್ಟುವ ಬೆಲೆಯಿಂದಲೂ (ಮೌಲ್ಯದಿಂದಲೂ) ತಿಳಿಯಬಹುದು.

**ದೇವತೆಗಳ ವಾಹನಯೋಗ್ಯ ಕುದುರೆಗಳ ಬಣ್ಣವಿಶೇಷ –**

ಚಂದ್ರನ ಕುದುರೆಗಳು ಸಂಪೂರ್ಣವಾಗಿ ಬೆಳ್ಳಗಿರುತ್ತವೆ. ದೇವತೆಗಳ ರಾಜ ಇಂದ್ರನ ಕುದುರೆಗಳು ಚಿನ್ನದಂತೆ ಹೊಂಬಣ್ಣ ಉಳ್ಳವುಗಳು. ಯಮನ ಕುದುರೆಗಳು ಕಪ್ಪಾಗಿರುತ್ತವೆ. ವಿಷ್ಣುವಿನ ಕುದುರೆಗಳು ಕರ್ಕಜಾತಿಯ ಕುದುರೆಯಂತೆ ಕೆಂಪಾಗಿರುತ್ತವೆ. ಸೂರ್ಯನ ಕುದುರೆಗಳು ಬಾಗೇ ಮರದ ಎಲೆಗಳಂತೆ ಹಸಿರಾಗಿರುತ್ತವೆ (ಅಥವಾ ಗಿಳಿಯ ರೆಕ್ಕೆಯಂತೆ ಹಸಿರಾಗಿರುತ್ತವೆ). ಅಗ್ನಿಯ ಕುದುರೆಗಳು ಮುತ್ತುಗದ ಹೂವಿನಂತೆ ಕೆಂಪಾಗಿರುತ್ತವೆ. ವರುಣನ ಕುದುರೆಗಳು ಮೋಡದಂತೆ ಕಪ್ಪಾಗಿರುತ್ತವೆ. ಕುಬೇರನ ಕುದುರೆಗಳಾದರೋ ಬಿಳಿಯ ಕಮಲದಂತೆ ಬೆಳ್ಳಗಿರುತ್ತವೆ.

ಹೀಗೆ ವಿವಿಧ ಬಣ್ಣಗಳಿಂದ ಕೂಡಿದ ಕುದುರೆಗಳ ಶುಭಕರವಾದ ಸುಳಿಗಳು, ಸ್ವರಗಳು ಹಾಗೂ ಸುಂದರವಾದ ರೂಪವನ್ನು ಹೇಳಿದ ನಂತರ ಮೇಲೆ ಹೇಳಿದ ದೇವತೆಗಳೆಲ್ಲರಿಗೂ ಬೇರೆ ಬೇರೆ ವಾಹನವನ್ನು ಕೂಡ ಹೇಳಲಾಯಿತು.

## 13. ರಾಜನ ವಾಹನಕ್ಕೆ ಯೋಗ್ಯವಾದ ಕುದುರೆಗಳು

ದೇವತೆಗಳ ಕುದುರೆಯ ಬಗ್ಗೆ ಹೇಳಿದ ನಂತರ ರಾಜನಿಗೆ ಅರ್ಹವಾದಂತಹ ವಾಹನ ಯೋಗ್ಯವಾದ ಶ್ರೇಷ್ಠವಾದ ಕುದುರೆ, (ಪರಮಾಶ್ವ) ಹಾಗೂ ಪಟ್ಟಾಭಿಷೇಕಕ್ಕೆ ಯೋಗ್ಯವಾದ ಅಭಿಷೇಕ ಕುದುರೆ, ಪೂಜಾರ್ಹವಾದಂತಹ ಕುದುರೆ, ಹಾಗೂ

ಮಂತ್ರಿಗಳಿಗೆ, ಸೇನಾಧಿಪತಿಗೆ ಮತ್ತು ಯುವರಾಜನಿಗೆ ಸವಾರಿ ಮಾಡಲು ಯೋಗ್ಯವಾದ ಬೇರೆ ಬೇರೆ ಕುದುರೆಗಳನ್ನು ಋಷಿಗಳು ಹೇಳಿದ್ದಾರೆ. ಅದನ್ನು ನಾನು ನಿಮಗೆ ಒಂದೊಂದಾಗಿ ತಿಳಿಯ ಹೇಳುವೆನು.

**ದೇವಾಶ್ವ (ದೇವತೆಗಳ ಕುದುರೆ) –**

ಕುದುರೆಯ ದೇಹವು ತಾವರೆಯ ಹೂವಿನ ಕೇಸರಕ್ಕೆ ಸಮಾನವಾದ ಬಣ್ಣ, ನವಣೆ ಹಣ್ಣಿನ ಬಣ್ಣ, ಬಾಗೆ ಮರದ ಎಲೆಯ ಬಣ್ಣ, (ಶುಕಪತ್ರ) ಕೆಂದಾವರೆಯ ಬಣ್ಣ ಮತ್ತು ನವಿಲಿನ ಕತ್ತಿನ ನೀಲಿ ಬಣ್ಣದಿಂದ ಕೂಡಿರುತ್ತವೆ. ಕಣ್ಣುಗಳು ವೈಡೂರ್ಯಮಣಿಯಂತೆ ಇರುತ್ತವೆ. ಇದಲ್ಲದೆ ಬೇರೆ ಬೇರೆ ದೇಹ ಬಣ್ಣವುಳ್ಳ ಕುದುರೆಯ ಕಾಲುಗಳು ಕೆಂಪು, ಹಳದಿ ಮತ್ತು ಬಿಳಿಯ ಬಣ್ಣದಿಂದ ಕೂಡಿರುತ್ತವೆ. ಕೆಂಪು ಬಣ್ಣದ ನಾಲಿಗೆ, ಉನ್ನತವಾದ ದವಡೆ ಹಾಗೂ ಮೊಣಕಾಲು ಮತ್ತು ಒಳ್ಳೆಯ ಲಕ್ಷಣದಿಂದ ಕೂಡಿದ್ದು, ಉತ್ತಮವಾಗಿ ಶುಭ್ರವಾಗಿ ಶಕ್ತಿಶಾಲಿಯಾಗಿರುತ್ತವೆ.

ಹಾಗೆಯೇ ಯಾವ ಕುದುರೆಯ ಶಬ್ದವನ್ನು ಕೇಳುತ್ತಿದ್ದಂತೆ ಬೇರೆ ಕುದುರೆಗಳು ಹೆದರಿಕೆಯಿಂದ ಭಯದಿಂದ ಎದ್ದು ನಿಲ್ಲುತ್ತವೋ ಮತ್ತು ದುಃಖದಿಂದ ಪದೇ ಪದೇ ಮೂತ್ರ ಹಾಗೂ ಮಲವನ್ನು ವಿಸರ್ಜಿಸುತ್ತವೋ, ಅಂತಹ ಕುದುರೆಗಳು ದೇವತೆಗಳಿಗೆ ಯೋಗ್ಯವಾದ ಕುದುರೆಗಳೆಂದು ಪ್ರಸಿದ್ಧವಾಗಿವೆ.

**ಪುರೋಧಾಶ್ವ (ಪುರೋಹಿತ ಸಂಬಂಧವಾದ ಕುದುರೆ) –**

ಕಪ್ಪಾದ ಮೋಡದಂತೆ ಇರುವ ಬಿಳಿ / ಕಪ್ಪು / ನೀಲಿ / ಹಸಿರು ಬಣ್ಣಗಳ ಸುಳಿಗಳಿಂದ ಕೂಡಿದ, ಬಿಳಿಯ ಗೊರಸು ಹಾಗೂ ಬಿಳಿಯ ಕಣ್ಣುಗಳಿಂದ ಕಂಗೊಳಿಸುತ್ತಿರುವ, ಶ್ರೇಷ್ಠವಾದ ಕುದುರೆಗೆ ಮಹಾರಾಜನು ಪುರೋಧಾಶ್ವ ಎಂದು (ಪೂಜಾರ್ಹ ಕುದುರೆಯೆಂದು) ಹೆಸರು ಕೊಡಬೇಕು.

**ಪರಮಾಶ್ವ (ರಾಜನ ವಾಹನಕ್ಕೆ ಯೋಗ್ಯವಾದ ಶ್ರೇಷ್ಠವಾದ ಕುದುರೆ) –**

ಯಾವ ಕುದುರೆಯ ದೇಹ ಬಣ್ಣವು ಸೂರ್ಯನಂತೆ ಅಥವಾ ಚಂದ್ರನಂತೆ (ಈ ಎರಡು ಬಣ್ಣಗಳಲ್ಲಿರುತ್ತದೋ) ಅಂದರೆ ಆಗತಾನೇ ಉದಯಿಸುತ್ತಿರುವ ಎಳೆಯ ಸೂರ್ಯನಂತೆ ಹೊಳೆಯುವ ಕೆಂಬಣ್ಣ ಅಥವಾ ಚಂದ್ರನಂತೆ ಕಂಗೊಳಿಸುವ ಬಿಳಿಯ ಬಣ್ಣದಿಂದ ಕೂಡಿರುತ್ತದೋ, ಹಾಗೆಯೇ ಕುದುರೆಯ ಕಿವಿ ಮುಂತಾದ ಅವಯವಗಳೂ ದೈವಮಯವಾಗಿರುತ್ತವೋ ಮತ್ತು ಕಣ್ಣಿಗೆ ಮನಸ್ಸಿಗೆ ಸಂತೋಷವನ್ನುಂಟು ಮಾಡುತ್ತಾ ಸದಾ ಆನಂದದಿಂದಿರುತ್ತವೋ ಅಂತಹ ಗುಣಗಳಿಂದ ಕೂಡಿದ ಕುದುರೆಯನ್ನು ಪರಮಾಶ್ವ ಕುದುರೆಯನ್ನುತ್ತಾರೆ.

ಈ ಕುದುರೆಯು ಎಲ್ಲಾ ಶುಭಲಕ್ಷಣಗಳಿಂದ ಕೂಡಿ ಕಂಗೊಳಿಸುತ್ತವೆ. ಇದರ ಎಲ್ಲಾ ಅಂಗಗಳಲ್ಲಿಯೂ ಬ್ರಹ್ಮ ಮುಂತಾದ ದೇವತೆಗಳು ನೆಲೆಸಿರುತ್ತಾರೆ. ಮುಖದಲ್ಲಿ ಬ್ರಹ್ಮನು, ಕಣ್ಣುಗಳಲ್ಲಿ ಸೂರ್ಯನು, ಕಿವಿಗಳಲ್ಲಿ ಸರ್ಪದೇವತೆಗಳು, ಹಣೆಯಲ್ಲಿ ಚಂದ್ರನು, ಎಡ ಮೂಗಿನ ಹೊಳ್ಳೆಯಲ್ಲಿ ನಿರ್ಋತಿ (ನೈರುತ್ಯ ದಿಕ್ಕಿನ ದಿಕ್ಪಾಲಕ), ಭುಜಗಳಲ್ಲಿ ಅಶ್ವಿನೀ ದೇವತೆಗಳು, ಕುದುರೆಯ ಕೆನೆತದಲ್ಲಿ ಮೇಘವು, ಕತ್ತಿನಲ್ಲಿ ಅಗ್ನಿಯೂ; ಶರೀರದಲ್ಲಿ ವೈಕುಂತವು, ಎದೆಯಲ್ಲಿ ಈಶ್ವರನು ನೆಲೆಸಿದ್ದಾರೆ. ರಾಜರುಗಳು ಮಾಡುವ ಯುದ್ಧದಲ್ಲಿ ಜಯವನ್ನು ಪಡೆಯುವುದಕ್ಕಾಗಿ ಈ ಕುದುರೆಯು ಹುಟ್ಟಿದೆ ಎಂದು ತಿಳಿಯಬೇಕು.

ಈ ಲಕ್ಷಣವುಳ್ಳ ಕುದುರೆಯು ಯಜ್ಞಸ್ವರೂಪವಾದುದು, ಸ್ವರ್ಗಕ್ಕೆ ದಾರಿಯನ್ನು ತೋರಿಸುವುದು ಮತ್ತು ಪುಣ್ಯ ರೂಪವಾದದ್ದಾಗಿ ರಾಜನಿಗೆ ಅಧಿಕ ಬಲವನ್ನು ಉಂಟುಮಾಡುತ್ತವೆ ಎಂಬುದಾಗಿ ತಿಳಿದು ರಾಜನು ಇಂತಹ ಕುದುರೆಯನ್ನು ಖಂಡಿತವಾಗಿ ಪೂಜಿಸಬೇಕು. ಹೀಗೆ ಈ ಕುದುರೆಗಳನ್ನು ಪೂಜಿಸಿದಂತಹ

ರಾಜನು, ರಾಜರುಗಳಿಗೆ ರಾಜನಾಗಿ, ಇಂದ್ರನು ಸ್ವರ್ಗಕ್ಕೆ ಅಧಿಪತಿಯಾದಂತೆ ಭೂಮಂಡಲಕ್ಕೆ ಸ್ವಾಮಿಯಾಗುವನು.

**ಅಭಿಷೇಚನಿಕಾಶ್ವ (ಅಭಿಷೇಕಾರ್ಹವಾದ ಕುದುರೆ) –**

ಇನ್ನು ಮುಂದೆ ಅಭಿಷೇಕಾರ್ಹವಾದ ಎಲ್ಲರೂ ಹೊಗಳುವಂತಹ ಶ್ರೇಷ್ಠವಾದ ಕುದುರೆಯ ಲಕ್ಷಣವನ್ನು ಹೇಳುತ್ತೇನೆ ಕೇಳು.

ಬಿಳಿಯ ಮುತ್ತಿನಹಾರ, ಬಿಳಿಯ ಶಂಖ, ಹಿಮ, ಚಂದ್ರ ಇವುಗಳಿಗೆ ಸಮಾನವಾದ ಮೈಬಣ್ಣವುಳ್ಳ, ತುಂಬಾ ಶಕ್ತಿಶಾಲಿಯಾದ, ಮಂಗಳಕರವಾದ, ನಿಂತು ನಿದ್ದೆ ಮಾಡುವ, ಎಲ್ಲವನ್ನೂ ಸಹಿಸಿಕೊಳ್ಳುವ, ಪರಿಮಳ ಸೂಸುವ, ಉತ್ತಮ ಜಾತಿಯಲ್ಲಿ ಹುಟ್ಟಿರುವ, ಶುಭ್ರವಾದ, ಶೌರ್ಯದಿಂದ ಕೂಡಿದ, ಶುಭವಾದ ಸುಳಿಗಳನ್ನುಳ್ಳ ಆಕರ್ಷಕರೂಪವನ್ನು ಹೊಂದಿರುವ ಕುದುರೆಗಳನ್ನು ಅಭಿಷೇಚ್ಯ ಕುದುರೆಗಳೆಂದು ಕರೆಯುತ್ತಾರೆ.

ಪ್ರಶಸ್ತವಾದ ಮುಖ, ತುಟಿ, ದವಡೆ ಹಲ್ಲುಗಳನ್ನು ಹೊಂದಿರುವ, ಕಾಂತಿಯಿಂದ ಕಂಗೊಳಿಸುವ, ದಷ್ಟಪುಷ್ಟವಾಗಿರುವ, ಶಕ್ತಿಶಾಲಿಯಾದ, ಸತ್ವಗುಣ–ದಿಂದ ಕೂಡಿದ, ಕಣ್ಮನಸ್ಸಿಗೆ ಆನಂದವನ್ನುಂಟುಮಾಡುವ, ಸಂತೋಷದಿಂದಿರುವ, ಮಂಗಳಕರವಾದ ಸುಳಿ ನಡಿಗೆ ಮತ್ತು ದನಿಯನ್ನು ಹೊಂದಿರುವ, ಸಂಪದ್ಯುಕ್ತ–ವಾದ ಕಾಂತಿಯಿಂದ ಕೂಡಿದ, ಇಂದ್ರಿಯಗಳನ್ನು ಜಯಿಸಿರುವ, ಕಫಯುಕ್ತವಾದ (ಶ್ಲೇಷ್ಮದಿಂದ ಕೂಡಿದ) ದೊಡ್ಡ ಶರೀರವುಳ್ಳ ಕುದುರೆಯನ್ನು ಯುವರಾಜನಿಗೆ ಯೋಗ್ಯವಾದ ಕುದುರೆಯೆಂದು ತಿಳಿದು ಅದನ್ನು ಪಟ್ಟಾಭಿಷೇಕ ಕುದುರೆಯೆಂದು ರಾಜನು ಹೆಸರಿಸಬೇಕು.

**ಕ್ಷತ್ರಿಯಾಶ್ವ (ಕ್ಷತ್ರಿಯರಿಗೆ ಯೋಗ್ಯವಾದ ಕುದುರೆ) –**

ಸ್ಫಟಿಕ ಶಿಲೆಯಂತೆ, ಹಿಮದಂತೆ, ಶಂಖದಂತೆ, ಬೆಳ್ಳಿಯಂತೆ, ಕಳಂಕವಿಲ್ಲದೆ, ಸೂರ್ಯನಂತೆ, ಚಂದ್ರನಂತೆ ಹೊಳೆಯುತ್ತಿರುವ **"ಬಿಳಿಕುದುರೆ"**. ಹೊಸದಾದ ದಾಳಿಂಬೆ ಹೂವಿನಂತೆ, ಹವಳದ ಬಣ್ಣದಂತೆ, ಬಾಲಸೂರ್ಯನಂತೆ ಇರುವ **"ಕೆಂಪುಕುದುರೆ"**. ದುಂಬಿಯ ಸಮೂಹದಂತೆ, ಕಾಡಿಗೆಯಂತೆ (ಕಣ್ಣಿಗೆ ಹಚ್ಚುವ ಕಪ್ಪು) ಕರಿನಾಗರ ಹಾವಿನಂತೆ, ಮೋಡದಂತೆ, ಮಸಿಯಂತೆ ಇರುವ **"ಕಪ್ಪುಕುದುರೆ"**. ಚಿನ್ನದಂತೆ ಹೊಳೆಯುವ, ಪ್ರಜ್ವಲಿಸುವ ಬೆಂಕಿಯ ತುದಿ-ಯಂತಿರುವ **"ಹೊಂಬಣ್ಣದ ಕುದುರೆ"**. ಸುಂದರವಾದ ಸಿಂಹ ಮತ್ತು ಆನೆಯ ನಡಿಗೆಯಂತೆ ನಡೆಯುವ, ಸ್ಪಷ್ಟವಾಗಿ ಕಾಣುವ ಎಲ್ಲಾ ಅವಯವಗಳಿಂದ ಕೂಡಿರುವ, ದೋಷರಹಿತವಾದ ಮುಖವುಳ್ಳ, ದಟ್ಟವಾದ ಮೃದುವಾದ ಕೂದಲುಗಳುಳ್ಳ, ಯಾರಿಗೂ ತೊಂದರೆಯನ್ನುಂಟು ಮಾಡದ ಶುಭ್ರವಾದ, ಸತ್ವಯುತವಾದ, ಯುದ್ಧಕ್ಕೆ ಸನ್ನದ್ಧವಾದ ಕುದುರೆಗಳನ್ನು **ಕ್ಷತ್ರಿಯ ಕುದುರೆ** ಎನ್ನುತ್ತಾರೆ.

**ಸಾನ್ನಾಹ್ಯಾಶ್ವ (ಯುದ್ಧಕ್ಕೆ ಸನ್ನದ್ಧವಾದ ಕುದುರೆ) –**

ವೈಶ್ಯಕುಲದ, ಬಹಿರಿಂದ್ರಿಯಗಳನ್ನು ನಿಗ್ರಹಿಸುವ, ಧೈರ್ಯದಿಂದಿರುವ, ಚತುರತೆಯಿಂದಿರುವ, ಕಾಂತಿಯಿಂದಿರುವ, ಶುಭಚಿಹ್ನೆಗಳನ್ನು ಹೊಂದಿರುವ, ಸುವಾಸನೆಯಿಂದಿರುವ, ಯುದ್ಧಕ್ಕೆ ಸನ್ನದ್ಧವಾಗಿರುವ ಕುದುರೆಯನ್ನು ಸಾನ್ನಾಹ್ಯ ಕುದುರೆಗಳೆನ್ನುತ್ತಾರೆ.

**ಔಪವಾಹಾಶ್ವ (ರಾಜನಿಗೆ ವಾಹನ ಯೋಗ್ಯವಾದ ಕುದುರೆ). –**

ಒರಟಾದ ಅಥವಾ ಸುಂದರವಾದ, ತೊಂದರೆಯನ್ನುಂಟು ಮಾಡುವ, ಹಳದಿ ಅಥವಾ ಬಿಳಿಬಣ್ಣದ ಕುದುರೆ, ರೋಮಕೂಪದಿಂದಿರುವ ಅಥವಾ

ಬೂದಿಬಣ್ಣದ ಚಿತ್ರವಿರುವ, ಅಥವಾ ಕ್ರೌಂಚಪತ್ರದ (ನೀರು ಕೊಕ್ಕರೆಯ ಗರಿಯ) ಬಣ್ಣದಂತಿರುವ ಕುದುರೆಯು ಅನಾಯಾಸವಾಗಿ ಸವಾರನನ್ನು ಹೊರುವಂತಹ ಗಟ್ಟಿಯಾದ ಕಾಲುಗಳುಳ್ಳ, ಪರಾಕ್ರಮದಿಂದಿರುವ, ಇಂದ್ರಿಯ ನಿಗ್ರಹಿಸುವ, ಒಳ್ಳೆಯ ಸ್ವಭಾವವುಳ್ಳ, ಮಂಗಳಕರವಾದ ಒಳ್ಳೆಯ ನಡೆಯುಳ್ಳ, ಒಳ್ಳೆಯ ಬೆನ್ನುಳ್ಳ, ಇತರ ಕುದುರೆಗಳನ್ನು ಹಿಂದಿಕ್ಕಿ ವೇಗವಾಗಿ ಹೋಗುವ (ಬೇರೆ ಯಾವ ಕುದುರೆಯನ್ನು ಹಿಂಬಾಲಿಸದೆ ತಾನೇ ಮುಂದೆ ಹೋಗುವ) ರಾಜನ ಯುದ್ಧದ ಕುದುರೆಗೆ ಸರಿಸಾಟಿಯಾಗಿರುವ ಕುದುರೆಯನ್ನು ರಾಜನು ವಾಹನಕ್ಕೆ ಯೋಗ್ಯವೆಂದು ಆರಿಸಿಕೊಳ್ಳಬೇಕು.

**ಸಚಿವಾಶ್ವ (ಮಂತ್ರಿಗಳು ಸಂಚರಿಸಲು ಯೋಗ್ಯವಾದ ಕುದುರೆ) –**

ಪ್ರಖರವಾದ ಕಿರಣಗಳಿಂದ ಹೊಳೆಯುತ್ತಿರುವ, ಬಿಳಿ ಬಣ್ಣದಿಂದ ಕೂಡಿದ, ಕೆಂಪು, ಕಪ್ಪು, ಹಸಿರು ಬಣ್ಣಗಳ ಮಂಗಳಕರವಾದ ಶುಭ್ರ ಛಾಯೆಯುಳ್ಳ ಸಹನೆಯಿಂದಿರುವ ಮತ್ತು ತಾರುಣ್ಯದಿಂದಿರುವ ಕುದುರೆಯನ್ನು ಮಂತ್ರಿಗಳ ವಾಹನಕ್ಕಾಗಿ ನಿಯೋಜಿಸಬೇಕು.

**ಸನ್ನಾಹ್ಯ (ಯುದ್ಧಕ್ಕೆ ಸನ್ನದ್ಧವಾದ ಕುದುರೆ) –**

ಬಿಳುಪಾದ ಒಳ್ಳೆಯ ಕಾಂತಿಯಿಂದ ಕೂಡಿರುವ, ಸುವಾಸಿತವಾದ ಕೆಂಪಾದ ಚರ್ಮ, ನಾಲಿಗೆ, ಹಲ್ಲು, ಗೊರಸು, ವೃಷಣಗಳುಳ್ಳ, ಕಾಂತಿಯಿಂದ ಕೂಡಿದ ಒಳ್ಳೆಯ ದನಿಯುಳ್ಳ ಕುದುರೆಯು ರಾಜನ ಯುದ್ಧಕ್ಕೆ ಸಮರ್ಥವಾದ ಕುದುರೆಯಾಗಿರುತ್ತದೆ.

ಹಣೆಯಲ್ಲಿ ಶಂಖದಂತೆ ಬಿಳಿಯ ಚಿಹ್ನೆಯುಳ್ಳ, ನಾಲ್ಕು ಕಾಲುಗಳಲ್ಲಿಯೂ ಪ್ರದಕ್ಷಿಣಾಕಾರದಲ್ಲಿ ಸುಳಿಗಳಿರುವ, ರಾಜಹಂಸದ ದನಿಯಂತೆ ಹೆದರಿಕೆಯನ್ನುಂಟು

ಮಾಡುವ ಹೇಷಾರವವುಳ್ಳ (ಗಂಭೀರವಾದ ಧ್ವನಿಯುಳ್ಳ), ಕುದುರೆಗಳು ರಾಜನ ಯುದ್ಧಕ್ಕೆ ಸಮರ್ಥವಾದ ಕುದುರೆಗಳು.

**ರಾಜನ ಸವಾರಿಗೆ ಯೋಗ್ಯವಾದ ಕುದುರೆ –**

ಸುಂದರವಾದ ಹೂವಿನಂತೆ ಮೃದುವಾಗಿರುವ, ಬಿಳಿಯ ಹಣೆಯುಳ್ಳ, ಮಂಗಳಕರವಾದ ಕಾಂತಿಯಿಂದ ಕೂಡಿದ, ವೈಡೂರ್ಯಮಣಿಯಂತೆ, ಸುಂದರವಾದ ಕಣ್ಣುಗಳುಳ್ಳ, ಹಣೆಯಲ್ಲಿ ಉದ್ದವಾದ ಚಿಹ್ನೆಗಳಿಂದ ಕೂಡಿರುವ ಕುದುರೆ ರಾಜನು ಸವಾರಿ ಮಾಡಲು ಯೋಗ್ಯವಾದ ಕುದುರೆಯಾಗಿರುತ್ತದೆ. ಮೋಡದಂತೆ ಕಪ್ಪಾದ, ಮೋಡದ ಗುಡುಗಿನ ಸದ್ದಿನಂತೆ ಕೆನೆಯುವ, ಜೇನುತುಪ್ಪ ಹಾಗೂ ಹಸುವಿನ ತುಪ್ಪದಂತೆ ಪರಿಮಳವನ್ನು ಹೊರಸೂಸುವ, ಆನೆ ಹಾಗೂ ಹಂಸಗಳಂತೆ ನಡೆಯುವ, ಹೂವಿನ ಹಾರ ಮತ್ತು ಸುಗಂಧ ಲೇಪನವನ್ನು ಇಷ್ಟಪಡುವ ಕುದುರೆಯೂ ಸಹ ರಾಜನ ವಾಹನ ಯೋಗ್ಯವಾದ ಕುದುರೆಯಾಗಿರುತ್ತದೆ.

ಯಾವ ಕುದುರೆಯು ಮಿಂಚುಹುಳುವಿನಂತೆ ಮಿನುಗುವ ದೇಹ ಕಾಂತಿಯಿಂದ ಕೂಡಿ, ಪಾರಿವಾಳದ ಕಣ್ಣಿನಂತೆ ಸುಂದರವಾದ ಕಣ್ಣನ್ನು ಹೊಂದಿರುತ್ತದೋ, ಅದು ರಾಜನ ಕುದುರೆ. ಶುಭ್ರವಾದ ಸುವಾಸಿತವಾದ ಮಂಗಳಕರವಾದ ದನಿಯಿರುವ ಕುದುರೆಯೂ ಸಹರಾಜನ ಕುದುರೆ.

ದೇಹವು ಕೆಂಪು ಹವಳದ ಮಣಿಯಂತಿದ್ದು, ಕಣ್ಣುಗಳು ವೈಡೂರ್ಯ ಮಣಿಯಂತಿದ್ದು, ತಲೆಯ ಬಲಭಾಗದ ಕೂದಲಿನ ತುದಿಯಲ್ಲಿ ಕಪ್ಪೆ ಚಿಪ್ಪಿನಂತಹ ಸುಳಿಯಿದ್ದು, ಎತ್ತರವಾದ ಆಯತಾಕಾರದಲ್ಲಿರುವ ಶರೀರವಿರುವ ಕುದುರೆಗಳುಳ್ಳ ರಾಜನು ತನ್ನ ಸೇನಾಸಹಿತನಾಗಿ ಉತ್ಸಾಹದಿಂದ, ಆನಂದದಿಂದ ಶತ್ರುಗಳ

ಸೇನೆಯನ್ನು ಸಂಪೂರ್ಣವಾಗಿ ಗೆದ್ದು ಬರುತ್ತಾನೆ. ಅಂತಹ ಕುದುರೆಯು ರಾಜನ ವಾಹನಯೋಗ್ಯ ಕುದುರೆಯೆಂದು ತಿಳಿಯಬೇಕು.

ಚಿನ್ನದಂತೆ ಹೊಳೆಯುತ್ತಿರುವ, ಜಿಂಕೆಯಂತೆ ಶೀಘ್ರವಾದ ಗಮನವುಳ್ಳ, ಸೂರ್ಯನಂತೆ ಕಣ್ಣುಗಳುಳ್ಳ ಮತ್ತು ಭೂಮಿಯ ಮೇಲೆ ಓಡಲು ಉತ್ಸುಕವಾಗಿ-ರುವಂತಹ ಕುದುರೆಯೂ ಸಹ ರಾಜನ ಸವಾರಿಗೆ ಯೋಗ್ಯವೆಂದು ಹೇಳಲಾಗಿದೆ.

**ನಂದಿಮುಖದ ಕುದುರೆ –**

ತಲೆ, ಮುಖ ಹಾಗೂ ಕಾಲುಗಳು ಬಿಳುಪಾಗಿರುವ ನಂದಿಮುಖವೆಂಬ ಹೆಸರಿನ ಈ ಕುದುರೆಯು ಸಕಲ ಇಷ್ಟಾರ್ಥಸಿದ್ಧಿಯನ್ನು ಉಂಟುಮಾಡುತ್ತವೆ.

ದಯಾಹೀನರಾದ ಮಹಾಶೂರರು ಅತ್ಯಧಿಕವಾಗಿ ಕುಳಿತು ಸಂಚರಿಸುವಂತಹ, ಹುಲಿಯ ಮರಿಯ ಗರ್ಜನೆಯಂತೆ ಹೇಷಾರವವನ್ನು ಮಾಡುತ್ತಾ ಅಭಿನಂದನೆಗೆ ಪಾತ್ರವಾಗಿರುವಂತಹ, ಆ ಕುದುರೆಯನ್ನು ನಂದಿಮುಖದ ಕುದುರೆ ಎಂದು ಹೇಳಲಾಗಿದೆ.

ಅತ್ಯಂತ ಗೌರವದಿಂದಿರುವ, ಸ್ವಚ್ಛವಾದ, ನಿರಾತಂಕವಾದ, ದೀರ್ಘವಾದ ಆಯುಸ್ಸನ್ನು ಹೊಂದಿರುವ ಪ್ರತಿಕೂಲ ಪರಿಸ್ಥಿತಿಯಲ್ಲೂ ನೀರನ್ನು ಮಾತ್ರ ಕುಡಿಯುವ, ನಿರ್ಮಲವಾದ ಸತ್ವ ಗುಣದಿಂದ ಕೂಡಿದ ಕುದುರೆಯು ರಾಜನದು.

ಈ ಕುದುರೆಗಳಿಗೆ ದೀಪದ ಜ್ವಾಲೆಯ ತುದಿಯಂತಿರುವ ಕಡೆಗಣ್ಣು, ಗಿಡುಗದ ಕಣ್ಣಿನ ದೃಷ್ಟಿಗೆ ಸಮಾನವಾದ ಕಣ್ಣಿನ ದೃಷ್ಟಿ, ನೀರು ಕೊಕ್ಕರೆಯಂತೆ ಕತ್ತು, ಆನೆಯಂತಹ ನಡಿಗೆ, ಸಮುದ್ರದಂತೆ ವಿಸ್ತಾರವಾದ ಪಾದಗಳು, ಕೋತಿಗಳು ಉದ್ವೇಗದಿಂದ ಹೇಗೆ ನೆಗೆಯುತ್ತವೋ ಆ ರೀತಿಯಲ್ಲಿ ನೆಗೆಯುವಂತಹ ಹಾಗೂ ಸ್ವಚ್ಛಂದವಾಗಿ ಯುದ್ಧದಲ್ಲಿ ಎಲ್ಲವನ್ನೂ ನೋಡುವಂತಹ ಸ್ವಭಾವ, ಶಂಖ,

ಕೊಕ್ಕರೆ, ಸಿಂಹ, ನಗಾರಿ, ಮೋಡ, ಹುಲಿ ಮತ್ತು ಆನೆಯ ದನಿಗೆ ಸಮಾನವಾದ ಗಂಭೀರವಾದ ದನಿ, ಸಿಂಹದಂತೆ ವಿಶಾಲವಾದ ಎದೆ, ಹುಲಿಗೆ ಸಮಾನವಾದ ತೋಳು (ಶಕ್ತಿಯುತವಾದ ತೋಳು), ಮಂಗಳಕರವಾದ ಸುಳಿಗಳು, ಪ್ರಮುಖ ಜಾತಿಯಲ್ಲಿ ಹುಟ್ಟಿರುವಿಕೆ, ಒಳ್ಳೆಯ ಕಾಂತಿಯುತವಾದ ಬಣ್ಣದಿಂದ ಹೊಳೆಯುವ ಶರೀರ, ಒಂಟೆಯ ಕಣ್ಣಿನಂತೆ ಕಣ್ಣು, ಸುಂದರವಾಗಿ ಕಾಣುವ, ಮಿತ್ರನಂತೆ ಇರುವ, ಪರಿಮಳಯುಕ್ತವಾದ ಉಸಿರನ್ನು ಹೊಂದಿ, ಶತ್ರುರಾಜರನ್ನು ಗೆದ್ದು, ಅವನ ರಾಜ್ಯ, ಕೋಶ ಮತ್ತು ಎಲ್ಲಾ ವಿಧವಾದ ಸುಖ–ಸಂಪತ್ತುಗಳನ್ನು ರಾಜನಿಗೆ ಕೊಡಿಸುವ ಕುದುರೆಗಳು ಸರ್ವಶ್ರೇಷ್ಠವಾದವುಗಳು ಹಾಗೂ ಧನ್ಯವಾದವುಗಳು.

**ಕಪ್ಪುಕಿವಿಯ ಕುದುರೆಯ ಲಕ್ಷಣ (ಶ್ಯಾಮಕರ್ಣ ಲಕ್ಷಣ) –**

ಕಪ್ಪು ಕಿವಿ, ಬಿಳಿ ಕೂದಲು, ಹಗಲಿನಂತೆ ಪ್ರಕಾಶಮಾನವಾದ ಹಣೆಯ ಮೇಲಿನ ಚಿಹ್ನೆಗಳು, ಈ ರೀತಿಯ ಬಣ್ಣದಿಂದ ಕೂಡಿರುವ ಕುದುರೆಗಳು ಶ್ಯಾಮವರ್ಣ ಕುದುರೆಗಳು. ಈ ಆಕಾರದ ಕುದುರೆಗಳು ಎಲ್ಲಿ ವಾಸವಾಗಿರುತ್ತವೋ ಅಲ್ಲಿ ಸಸ್ಯಗಳು ಸಮೃದ್ಧವಾಗಿ ಬೆಳೆಯುತ್ತವೆ. ಮೋಡಗಳು ಸಕಾಲದಲ್ಲಿ ಮಳೆಯನ್ನು ಸುರಿಸುತ್ತವೆ. ಇಂತಹ ಶುಭಲಕ್ಷಣದಿಂದ ಕೂಡಿರುವ ಶ್ರೇಷ್ಠವಾದ ಕುದುರೆಗಳು ಎಲ್ಲಿ ವಾಸಿಸುತ್ತವೋ ಅಲ್ಲಿ ತರುಣ ವಯಸ್ಸಿನ ಕುದುರೆಗಳು ಆನಂದ ಪಡುತ್ತವೆ. ವಯಸ್ಸಾದ ಕುದುರೆಗಳು ಯಾವುದೇ ರೋಗಗಳಿಲ್ಲದೆ ಆರೋಗ್ಯವಾಗಿರುತ್ತವೆ. ಆದುದರಿಂದ ರಾಜನು ತನ್ನ ದೇಶಕ್ಕೆ ಬಂದಂತಹ ಇಂತಹ ಗುಣಗಳಿಂದ ಕೂಡಿರುವ ಶ್ರೇಷ್ಠವಾದ ಕುದುರೆಗಳನ್ನು ಗಂಧ, ಪುಷ್ಪ, ನೈವೇದ್ಯಗಳಿಂದ ಪೂಜಿಸಬೇಕು.

## 14. ಆಯುವಿನ ಲಕ್ಷಣ

ಶಾಲಿಹೋತ್ರ ಮುಂತಾದವರಿಂದ ಹಾಗೂ ಪೂರ್ವದಲ್ಲಿ ಋಷಿಗಳಿಂದ ಕುದುರೆಗಳ ಆಯುವಿನ ಬಗ್ಗೆ ಮೊದಲೇ ಹೇಳಲಾಗಿದೆ. ಉತ್ತಮವಾದ ಕುದುರೆಗಳಿಗೆ ಚಿಕ್ಕದಾದ ಕಿವಿ, ದೈನ್ಯವಾದ ದನಿ, ನೋಟ ಹಾಗೂ ನಡವಳಿಕೆ ಇರುವುದಿಲ್ಲ. ಇಂತಹ ಕುದುರೆ ಬಹಳಕಾಲ ಬದುಕುತ್ತವೆ.

ದೊಡ್ಡ ಮೂಗು, ದೊಡ್ಡ ಶರೀರ, ವಿಶಲವಾದ ಎದೆ, ನುಣುಪಾದ ಅವಯವವಿರುವ ಕುದುರೆಗಳು ಯಾವಾಗಲೂ ಹೆಚ್ಚಿನ ಆಯುಸ್ಸನ್ನು ಹೊಂದಿರುತ್ತವೆ.

ಕುದುರೆಯ ಕಿವಿಯನ್ನು ಪೀಡಿಸಿದಾಗ ಕುದುರೆಯ ಕಿವಿ ಕೆಂಪಾಗಿ ಹೊಳೆಯುತ್ತವೆ ಹಾಗೂ ಆ ಕ್ಷಣದಲ್ಲಿಯೇ ಕೆಂಪು ಬಣ್ಣವನ್ನು ಹೊಂದುವ ಕುದುರೆಯು ಸಹ ಬಹಳಕಾಲ ಬದುಕುತ್ತವೆ ಎಂಬ ಅಭಿಪ್ರಾಯವಿದೆ.

ಗಾಳಿಯನ್ನು ಮೂಸುತ್ತಾ, ತಾನು ತಿನ್ನುವ ಹುಲ್ಲನ್ನು ಕೆದಕಿ ಹರಡುತ್ತದೆಯೋ ಅಂತಹ ಕುದುರೆಯೂ ಸಹ ಬಹಳಕಾಲ ಜೀವಿಸುತ್ತವೆ. ಯಾವ ಕುದುರೆಗಳ ದೇಹದ ಕುಷ್ಟಿಕಾ ಭಾಗದಲ್ಲಿ ಎದ್ದು ಕಾಣುವಂತಹ ಗಂಟುಗಳಿದ್ದು ಮತ್ತು ಪ್ರಶಸ್ತವಾದ ಎದೆಯ ಭಾಗವಿರುತ್ತದೋ ಅಂತಹ ಕುದುರೆಗಳು ಬಹಳಕಾಲ ಬದುಕುತ್ತವೆ.

ಯಾವ ಕುದುರೆಯ ನಾಲಿಗೆಯ ತುದಿಯಲ್ಲಿ ತಾವರೆಹೂವಿನ ದಳದ ಆಕಾರದ ಗುರುತಿರುತ್ತದೋ, ಹಲ್ಲುಗಳು ಮುತ್ತಿನಂತೆ ಜೋಡಿಸಲ್ಪಟ್ಟಿರುತ್ತವೋ, ಜನನೇಂದ್ರಿಯವು ಶುಭ್ರವಾಗಿರುತ್ತವೋ ಹಾಗೂ ಸೀತ್ಕಾರ ಮಾಡುತ್ತಾ, ಬಾಲವನ್ನು ಅಲ್ಲಾಡಿಸುತ್ತಾ ಪರಿಮಳಯುಕ್ತವಾದ ಬೆವರಿನಿಂದ ಕೂಡಿ, ಉಗುರುಗಳು

ಕನ್ನಡಿಯಂತೆ ಸ್ವಚ್ಛವಾಗಿದ್ದು, ಎತ್ತರವಾದ ದೇಹ ಹೊಂದಿರುವ ಕುದುರೆಗಳೂ ಸಹ ಬಹಳಕಾಲ ಬದುಕುತ್ತವೆ.

ಯಾವ ಕುದುರೆಯ ದೇಹ ಪ್ರಮಾಣವು ಉದ್ದವಾಗಿರುತ್ತವೋ, ಮೂಗಿನ ಹೊಳ್ಳೆಗಳಲ್ಲಿ ಬೆಳೆದಿರುವ ಕೂದಲುಗಳು ನುಣುಪಾಗಿ, ಆಳವಾಗಿ, ಉದ್ದವಾಗಿ-ರುತ್ತವೋ, ಅಂತಹ ಕುದುರೆಗಳು ಹೆಚ್ಚುಕಾಲ ಬದುಕುತ್ತವೆ. ಹಣೆಯ ಮೇಲೆ ಹೆಚ್ಚಿನ ರೇಖೆಗಳಿದ್ದರೆ, ಛತ್ರ, ಚಾಮರ, ದುಂಬಿ, ಕತ್ತಿ, ಅಂಕುಶ, ಶಕ್ತಿ, ವಜ್ರ, ಗದೆ, ಬಾವುಟ ಇತ್ಯಾದಿಗಳ ಚಿಹ್ನೆಗಳು ಇದ್ದರೆ, ಮೂಗಿನ ಮೇಲೆ ಎಡಭಾಗದಿಂದ ಕೆಳಗೆ ಬಗ್ಗಿರುವಂತೆ ರೇಖೆಗಳಿದ್ದರೆ, ಆ ಕುದುರೆಗಳು ಹೆಚ್ಚುಕಾಲ ಬದುಕುತ್ತವೆ. ಕುದುರೆಯ ಮೂಗಿನ ಮೇಲಿನ ಗೆರೆಗಳು ಚಿಕ್ಕದಾಗಿದ್ದರೆ ಆ ಕುದುರೆಗಳು ಬಹಳ ಕಾಲ ಬದುಕುವುದಿಲ್ಲ.

ಬಿಲ್ವಮರ, ಸ್ವಸ್ತಿಕ ಚಿಹ್ನೆಗಳಂತೆ ಮೂಗಿನ ಮೇಲೆ ಗೆರೆಗಳಿದ್ದರೆ, ಅಂತಹ ಕುದುರೆಗಳು ಹೆಚ್ಚು ಕಾಲ ಬದುಕುತ್ತವೆ. ಮೂಗಿನ ಮೇಲ್ಭಾಗದಲ್ಲಿನ ರೇಖೆಗಳ ಪ್ರಮಾಣವು ಒಂದೇ ಸಮನಾಗಿದ್ದರೆ, ಅಂತಹ ಕುದುರೆಗಳು ಹತ್ತು ವರ್ಷಗಳು ಮಾತ್ರ ಬದುಕಿರುತ್ತವೆ ನಂತರ ಸಾಯುತ್ತವೆ. ಅದೇ ಗೆರೆಗಳು ಒಂದು ಅಂಗುಲವಿದ್ದರೆ ಹನ್ನೆರಡು ವರ್ಷಗಳೂ, ನಾಲ್ಕು ಅಂಗುಲವಿದ್ದರೆ ಹದಿಮೂರು ವರ್ಷಗಳ ಕಾಲ ಬದುಕುತ್ತವೆ. ಕುದುರೆಗಳ ಮೂಗಿನ ಮೇಲಿನ ಗೆರೆಗಳು ಅಡ್ಡವಾಗಿದ್ದರೆ ಅಥವಾ ಮೇಲ್ಮುಖವಾಗಿದ್ದರೆ ಆಗ ಹದಿನಾಲ್ಕು ವರ್ಷಗಳ ಕಾಲ ಬದುಕುತ್ತವೆ ಎಂದು ತಿಳಿಯಬೇಕು. ಯಾವಾಗಲೂ ಬಲಭಾಗಕ್ಕೆ ಮಲಗಿರುವ ಕುದುರೆಗಳೂ ಹಾಗೂ ಅಧಿಕ ಅಥವಾ ಸ್ವಲ್ಪ ಮೂತ್ರ ವಿಸರ್ಜಿಸುವ ಕುದುರೆಗಳು ಬಹಳಕಾಲ ಬದುಕುತ್ತವೆ. ದೇಹದ ಪೂರ್ವಭಾಗ ಬಾಗಿದ್ದರೆ ಹಾಗೂ ಎರಡು ಮಂಡಿಗಳು ಬಾಗಿದ್ದರೆ, ತೂಕಡಿಕೆ ಅಥವಾ ಬಳಲಿದ ಕಣ್ಣುಗಳಿರುವ ಕುದುರೆಗಳು ಅಲ್ಪಾಯು ಎಂದು ತಿಳಿಯಬೇಕು.

## 15. ಉತ್ಪಾತಪ್ರಕರಣಾಧ್ಯಾಯ (ಉತ್ಪಾತಾದಿ ಶಕುನ ಪ್ರಕರಣ)

ಕುದುರೆಗಳ ಆಯುಸ್ಸಿನ ಲಕ್ಷಣವನ್ನು ಹೇಳಿ, ಇಲ್ಲಿಂದ ಮುಂದೆ ಕುದುರೆಗಳ ವಿಭಾಗಕ್ಕೆ ಅನುಸಾರವಾಗಿ ಮತ್ತು ಅವುಗಳ ದೇಹಕಾಂತಿಯನ್ನು ಗಮನಿಸಿ ಶುಭ ಹಾಗೂ ಅಶುಭಫಲಗಳನ್ನು ಈಗ ತಿಳಿಸಲಾಗುವುದು.

ಕುದುರೆಯ ಸಂಪೂರ್ಣ ಶರೀರವು ಬೆಂಕಿಯಂತೆ ಹೊಳೆಯುತ್ತಿದ್ದರೆ ಅಂತಹ ರಾಜ್ಯದಲ್ಲಿ ಒಂದು ವರ್ಷಪೂರ್ತಿ ಮಳೆಯಾಗುವುದಿಲ್ಲ ಎಂಬಲ್ಲಿ ಸಂಶಯವಿಲ್ಲ. ಜನನೇಂದ್ರಿಯವು ಪ್ರಜ್ವಲಿಸುತ್ತಿದ್ದರೆ ಆಗ ಸಂಪೂರ್ಣ ನಗರವು ನಾಶವಾಗುತ್ತದೆ ಎಂದು ತಿಳಿಯಬೇಕು. ಹೊಟ್ಟೆಯ ಭಾಗ ಪ್ರಜ್ವಲಿಸುತ್ತಿದ್ದರೆ ಸಂಪತ್ತಿನ ನಾಶ. ಮಲವಿಸರ್ಜನ ಸ್ಥಳದಲ್ಲಿ ಮತ್ತು ಬಾಲದಲ್ಲಿ ದೇಹಕಾಂತಿ ಅಧಿಕವಾಗಿದ್ದರೆ ಅಂತಹ ಕುದುರೆಯುಳ್ಳ ರಾಜನಿಗೆ ಪರಾಜಯ ಉಂಟಾಗುತ್ತದೆ. ಹಣೆಯ ಮೇಲ್ಭಾಗ, ಮುಖ, ಮೂಗು, ಪೃಷ್ಠಭಾಗ ಮತ್ತು ಕಣ್ಣುಗಳಲ್ಲಿ ಅಧಿಕ ಕಾಂತಿಯಿದ್ದರೆ ಅಂತಹ ಕುದುರೆಗಳಿಂದ ರಾಜನಿಗೆ ಹೆದರಿಕೆ ಇರುತ್ತದೆ. ಹಣೆಯಲ್ಲಿ, ಎರಡು ಮುಂಗಾಲುಗಳಲ್ಲಿ, ಹಾಗೂ ಎದೆಯಲ್ಲಿ ಹೊಗೆಯಂತೆ ಇದ್ದರೆ, ಅದು ದೋಷಯುಕ್ತವಾದ ಕುದುರೆ, ಇದಕ್ಕೆ ಬದಲಾಗಿ ಆ ಭಾಗಗಳು ಮತ್ತು ಮೂಗಿನ ಭಾಗಗಳಲ್ಲಿ ಪ್ರಜ್ವಲಿಸುತ್ತಿದ್ದರೆ ಅದು ಪ್ರಶಸ್ತವಾದ ಕುದುರೆಯೆಂದು ತಿಳಿಯಬೇಕು. ರೋಗವಿಲ್ಲದೆ ಆರೋಗ್ಯವಾದ ಕುದುರೆಯು ಕೆಟ್ಟಮನಸ್ಸನ್ನು ಹೊಂದಿ, ತಿನ್ನುವುದನ್ನು ಬಿಟ್ಟು ಕಣ್ಣೀರು ಹರಿಸಿದರೆ ಅಂತಹ ಕುದುರೆ ತನ್ನ ಸ್ವಾಮಿಗೆ ಅಶುಭವನ್ನು ಉಂಟುಮಾಡುತ್ತದೆ. ಯಾವ ಕುದುರೆಯು ತಾನಾಗಿಯೇ ಬಾಯಿ ಮತ್ತು ತುಟಿಗಳನ್ನು ಅದರಿಸುತ್ತದೆಯೋ, ಹಾಗೂ ಕವಿಗಳು ಕಾವ್ಯದಲ್ಲಿ ಯಾವ ಕುದುರೆಯನ್ನು ನಿರ್ದೇಶಿಸುತ್ತಾರೋ ಅಂತಹ ಕುದುರೆಯು ರಾಜನಿಗೆ ಜಯವನ್ನು ಉಂಟುಮಾಡುತ್ತದೆ ಎಂದು ತಿಳಿಯಬೇಕು.

ಎಲ್ಲಾ ದೇವತೆಗಳಿಂದ ವಿರೋಧಿಸಲ್ಪಟ್ಟು, ಮತ್ತೆ ಎಲ್ಲರಿಂದಲೂ ಪೂಜಿಸಲ್ಪಡದಿರುವ, ಮತ್ತು ತನ್ನ ಎಡಗಾಲನ್ನು ನೆಲಕ್ಕೆ ಅಪ್ಪಳಿಸುವಂತಹ ಕುದುರೆಯು ರಾಜನ ದಿಗ್ವಿಜಯವನ್ನು ನಿಷೇಧಿಸುವಂತಹ ಕುದುರೆಯೆಂದು ತಿಳಿಯಬೇಕು.

ಒಡೆಯನು ಕುದುರೆಯ ಮೇಲೆ ಕುಳಿತ ಕ್ಷಣದಲ್ಲಿಯೇ ಯಾವ ಕುದುರೆಯು ತನ್ನ ಬಲಭಾಗವನ್ನು ನೋಡುತ್ತದೆಯೋ ಅಂತಹ ಕುದುರೆ ಸ್ವಾಮಿಗೆ ಜಯವನ್ನು ಸೂಚಿಸುತ್ತದೆ. ಆಕಸ್ಮಿಕವಾಗಿ ಕುದುರೆಗೆ ಹಲ್ಲು ಬಿದ್ದರೆ, ಆಗ ರಾಜನಿಗೆ ಯಾವುದೋ ತೊಂದರೆ ಉಂಟಾಗುತ್ತದೆ ಎಂದು ತಿಳಿಯಬೇಕು.

ಕುದುರೆಯು ತಾನಾಗಿಯೇ ಕಾಲುಗಳ ಎಡಭಾಗದಲ್ಲಿ ಬಾಲವನ್ನು ಆಡಿಸಿದರೆ ಒಡೆಯನಿಗೆ ಪ್ರವಾಸ ಉಂಟಾಗುತ್ತದೆ. ಕುದುರೆಗಳು ತಮ್ಮ ಬಾಲವನ್ನು ಸಂಪೂರ್ಣವಾಗಿ ಬಲಭಾಗದಲ್ಲಿ ಹರಡಿದರೆ ಆಗಲೂ ರಾಜನಿಗೆ ವಿಜಯವೆಂದು ತಿಳಿಯಬೇಕು.

## 16. ವಾಹನಶಿಕ್ಷಾಧ್ಯಾಯ

ಕುದುರೆಗಳ ಸವಾರಿಯ ವಿಧಾನವನ್ನು ಬ್ರಹ್ಮನಿಂದ ಯಾವ ರೀತಿಯಾಗಿ ಉಪದೇಶಿಸಲ್ಪಟ್ಟಿದೆಯೋ ಅದರ ಸಾರವನ್ನು ತೆಗೆದುಕೊಂಡು ಅದೆಲ್ಲವನ್ನು ನಾನು ಹೇಳುತ್ತೇನೆ.

ಕುದುರೆಯ ಸವಾರನ ದೋಷ ಹಾಗೂ ಗುಣಗಳನ್ನು ಮತ್ತು ಇತರ ವಿಶೇಷವಾದ ಅಂಶಗಳನ್ನು ಅಶ್ವಶಾಸ್ತ್ರಾನುಸಾರ ಹೇಳುತ್ತೇನೆ. ಕುದುರೆಯ ಪತೋಟಿಗಾಗಿ ಸಾಮ–ದಾನ–ದಂಡವೆಂಬ ಮೂರು ವಿಧವಾದ ಉಪಾಯವನ್ನು

ಅನುಸರಿಸಬೇಕು. ಸಾಮೋಪಾಯಕ್ಕೆ ಬಗ್ಗದ ಕುದುರೆಗಳನ್ನು ಕಠೋರ ರೀತಿಯ ವರ್ತನೆಯಿಂದ ನಿರ್ದೇಶಿಸಬೇಕು.

ಹೆದರುವ ಗಾಬರಿಗೊಳ್ಳುವ ಅಥವಾ ಅತಿಯಾದ ಆಸೆಯುಳ್ಳ ಮತ್ತು ಹಸಿವಿನಿಂದಿರುವ ಕುದುರೆಯನ್ನು **ಬ್ರಾಹ್ಮಣಕುದುರೆ**ಯೆಂದು ತಿಳಿಯಬೇಕು. ಪರಾಕ್ರಮದಿಂದಿರುವ, ಕೋಪವನ್ನು ನಿಗ್ರಹಿಸಿರುವ ಕುದುರೆಯು **ಕ್ಷತ್ರಿಯಕುದುರೆ** ಎಂದು ತಿಳಿಯಬೇಕು. ತೊಂದರೆಯನ್ನು ಉಂಟುಮಾಡುವ, ಕಲ್ಪವೃಕ್ಷದಂತಿರುವ, ದುಷ್ಟಕುದುರೆಯು **ವೈಶ್ಯಜಾತಿಯ ಕುದುರೆ**ಯೆಂದು ತಿಳಿಯಬೇಕು. ವಿಕಾರರೂಪ-ದಿಂದಿರುವ, ವಿಷಮರೂಪವುಳ್ಳ ಮತ್ತು ಅತ್ಯಂತ ಕೋಪಯುಕ್ತ ಕುದುರೆಗಳು **ಶೂದ್ರಜಾತಿಯಕುದುರೆ**ಗಳೆಂದು ಉದಾಹೃತವಾಗಿವೆ.

ಬ್ರಾಹ್ಮಣಕುದುರೆಯನ್ನು ಶಕ್ತ್ಯಾನುಸಾರ ದಾನದಿಂದ, ಕ್ಷತ್ರಿಯಕುದುರೆ-ಯನ್ನು ಸಾಮೋಪಾಯದಿಂದ, ವೈಶ್ಯಕುದುರೆಯನ್ನು ಕೋಲನ್ನು ಹಿಡಿದು ಹೆದರಿಸುವುದರಿಂದ, ಶೂದ್ರಕುದುರೆಯನ್ನು ಹೊಡೆಯುವುದರಿಂದಲೇ ಸವಾರಿ ಮಾಡುವಂತೆ ಮಾಡಬೇಕು.

ಹಗಲಿನ ಸಮಯದಲ್ಲಿ ವಿಪ್ರಕುದುರೆಯನ್ನೂ, ಒಂದು ಜಾವ ಕಳೆದನಂತರ ಕ್ಷತ್ರಿಯಕುದುರೆಯನ್ನೂ, ಸಂಧ್ಯಾಕಾಲ ಕಳೆದನಂತರ ವೈಶ್ಯಜಾತಿಯ ಕುದುರೆಯನ್ನೂ, ರಾತ್ರಿಯಲ್ಲಿ ಶೂದ್ರಜಾತಿಯ ಕುದುರೆಯನ್ನು ಸವಾರಿಮಾಡಬೇಕು.

ಉತ್ತಮ-ಮಧ್ಯಮ-ಅಧಮ ಎಂದು ಮೂರು ವಿಧವಾಗಿ ಕುದುರೆಗಳನ್ನು ವಿಂಗಡಿಸಿ, ಉತ್ತಮ ಕುದುರೆಗಳನ್ನು ಉಪಶಮನದ ಮಾತುಗಳಿಂದ, ದಂಡದಿಂದ ಮಧ್ಯಮ ಕುದುರೆಗಳನ್ನೂ, ಕೋಲನ್ನು ಹಿಡಿದು ಶಬ್ದಮಾಡುವುದರಿಂದ ಅಧಮಕುದುರೆಯನ್ನೂ ಪಳಗಿಸಬೇಕು ಎಂದು ವಿದ್ವಾಂಸರು ಹೇಳುತ್ತಾರೆ. ನಿರ್ಮಲವಾದ ಕುದುರೆಗಳ ವಿಷಯದಲ್ಲಿ ಹೇಳುವುದಾದರೆ ಅದು ಎಣ್ಣೆಯಂತೆ

ನುಣುಪಾಗಿಯೂ ಹಾಲಿನಂತೆ ಬಿಳುಪಾಗಿರುತ್ತವೆ, ಕುದುರೆಗಳ ಬಲ ಹಾಗೂ ದುರ್ಬಲಗಳ ಕಾರಣದಿಂದ ಅವುಗಳ ಶಿಕ್ಷಣವು ಎರಡು ವಿಧವಾಗಿರುತ್ತವೆ. ಬಲಿಷ್ಠವಾದ ಕುದುರೆಗಳನ್ನು ದುರ್ಬಲಗೊಳಿಸುವುದರಿಂದಲೂ, ದುರ್ಬಲ ಕುದುರೆಗಳನ್ನು ಬಲಗೊಳಿಸುವುದರಿಂದಲೂ ಅವುಗಳ ಬಲಾಬಲಯುತವಾದ ಸಾಮರ್ಥ್ಯವನ್ನು ತಿಳಿದು ಓಡಿಸಬೇಕು.

ಒದ್ದೆಯಾದ, ಗಟ್ಟಿಯಾದ ಕಲ್ಲು ಹಾಗೂ ನೀರಿನಿಂದ ಕೂಡಿದ, ಹುಲ್ಲು ಹಾಗೂ ಕಡ್ಡಿಗಳಿಂದ ಕೂಡಿದ ರಂಗಭೂಮಿಯನ್ನು (ಕುದುರೆಯ ತಾಲೀಮು ಜಾಗವನ್ನು) ತ್ಯಜಿಸಬೇಕು. ಸಮತಟ್ಟಾದ ಹಾಗೂ ವಿಶಾಲವಾದ ಸ್ವಲ್ಪ ಧೂಳಿನಿಂದ ಕೂಡಿದ, ಏಕಾಂತವಾದ, ನಿರ್ಜನವಾದ, ಸುಂದರವಾದ ಭೂಮಿಯಲ್ಲಿ ಕುದುರೆಗಳಿಗೆ ಶಿಕ್ಷಣ ಕೊಡಬೇಕು.

ಸ್ಥೂಲಕಾಯನಾದ, ಕೋಪಿಷ್ಠನಾದ, ಮೂರ್ಖನಾದ, ಉದ್ವೇಗ ಮನಸ್ಸುಳ್ಳವನಾದ, ಸ್ಥಿರವಾಗಿ ಕುಳಿತುಕೊಳ್ಳಲಾಗದ, ಕಾರಣವಿಲ್ಲದೆ ಕುದುರೆಗೆ ಹೊಡೆಯುವ ಸವಾರನಿಗೆ ಕುದುರೆಯು ಸುಲಭವಾಗಿ ವಶವಾಗುವುದಿಲ್ಲ. ಕುದುರೆಯ ಮೇಲೆ ಕುಳಿತು ಸವಾರಿ ಮಾಡುವಾಗ ಮೇಲಿನ ಆಸನವು ಅಲುಗಾಡುತ್ತಿದ್ದರೆ, ಆಗ ವಾಹಕನು ಅದರ ತಲೆಯ ಮೇಲೆ ಕೋಲಿನಿಂದ ಹೊಡೆದರೆ ಅಂತಹವನಿಗೆ ಆ ಕುದುರೆಯು ವಾಹನವಾಗುವುದಿಲ್ಲ, ಅಲ್ಲದೆ ಕುದುರೆಯ ಸವಾರಿಯು ದುರ್ಬಲವಾಗುತ್ತದೆ.

ದೃಢವಾಗಿ ಕುಳಿತುಕೊಳ್ಳುವವನು, ಕುದುರೆಯ ವಿಷಯವನ್ನು ತಿಳಿದವನು, ಬಿಗಿಯಾಗಿ ಮುಷ್ಟಿಯಿಂದ ಕಡಿವಾಣವನ್ನು ಹಿಡಿಯುವವನು, ಸೋಮಾರಿ-ಯಲ್ಲದವನು, ವಿರಾಗವಿಲ್ಲದೆ ಇರುವವನು ಮತ್ತು ಸ್ಥಿರವಾಗಿರುವವನು ಎಂಬುದಾಗಿ ಕುದುರೆಯ ಸವಾರರು ಆರು ವಿಧ.

ಯಾರು ಕುದುರೆಯ ಮನಸ್ಸನ್ನು ಸಮರ್ಪಕವಾಗಿ ತಿಳಿಯುವುದಿಲ್ಲವೋ, ಅವರು ದಂಡದಿಂದ ಹೊಡೆದರೂ ಕುದುರೆಯು ಅವರನ್ನು ಹೊರುವುದಿಲ್ಲ (ಸವಾರಿ ಮಾಡಲು ಬಿಡುವುದಿಲ್ಲ).

ಕೆನೆಯುವಾಗ, ಕಂಪಿಸುವಾಗ, ಹೆದರಿದಾಗ ಹಾಗೆಯೇ ಮಾರ್ಗದಲ್ಲಿ ಸಂಚರಿಸುವಾಗ, ಕೋಪಗೊಂಡಾಗ, ಚಿತ್ತಚಂಚಲವಾದಾಗ (ಭ್ರಾಂತವಾದಾಗ) ಈ ಆರು ಸನ್ನಿವೇಶಗಳಲ್ಲಿ ದಂಡದಿಂದ ಕುದುರೆಗೆ ಹೊಡೆಯಬೇಕು. ಕುದುರೆಯು ಕೆನೆಯುವಾಗ ತಲೆಗೆ ಹೊಡೆಯಬೇಕು, ಸಂಚರಿಸುವಾಗ ಮಂಡಿಗೆ, ಕೋಪಗೊಂಡಾಗ ಎದೆಗೆ, ಚಿತ್ತಭ್ರಾಂತವಾದಾಗ ಹೊಟ್ಟೆಗೆ, ಹೆದರಿದಾಗ ಮುಖಕ್ಕೆ ಹೊಡೆಯಬೇಕು. ಹಾಗೆಯೇ ದಾರಿ ಬಿಟ್ಟು ಎಲ್ಲೆಲ್ಲೋ ಹೋಗುವ ಕುದುರೆಯನ್ನೂ ಹೊಡೆಯಬೇಕು. ಹೀಗೆ ಅದರ ದೋಷ ಹಾಗೂ ಸ್ವಭಾವವನ್ನು ಅರಿತು ಸಂದರ್ಭಕ್ಕೆ ಅನುಗುಣವಾಗಿ ಹಿಂದೆ ಹೇಳಿದ ಜಾಗಗಳಲ್ಲಿ ಹೊಡೆಯಬೇಕು. ಸರಿಯಾಗಿ ಸ್ಥಾನಗಳನ್ನು ತಿಳಿಯದೇ ಕುದುರೆಗಳನ್ನು ಹೊಡೆದರೆ ಜೀವನ ಪರ್ಯಂತ ಅವು ಸವಾರನ ಹತೋಟಿಗೆ ಸಿಲುಕುವುದಿಲ್ಲ, ಅಲ್ಲದೆ ಅಂತಹ ಕುದುರೆಗಳು ಆಜನ್ಮಪರ್ಯಂತ ತನ್ನ ದೋಷವನ್ನು ಬಿಡುವುದಿಲ್ಲ.

## 17. ಧಾರಾಧ್ಯಾಯ

ಕುದುರೆಯ ಗತಿಯನ್ನು ಅಶ್ವಶಾಸ್ತ್ರ ಬಲ್ಲ ಋಷಿಗಳು ಐದು ವಿಧವೆಂದು ಹೇಳಿದ್ದಾರೆ. ಮೊದಲನೆಯದು ವಿಕ್ರಮಾ, ಎರಡನೆಯದು ಪುಲಕಾ, ಮೂರನೆಯದು ಪೂರ್ಣಕಂಠೀ, ನಾಲ್ಕನೆಯದು ತ್ವರಿತಾ ಮತ್ತು ಐದನೆಯ ಗತಿ ನಿರಾಲಂಬಾ ಎಂದು ಪ್ರಸಿದ್ಧವಾಗಿದೆ. ಆರನೆಯ ಗತಿಯನ್ನು ಯಾರೂ ಹೇಳಿಲ್ಲ ಹಾಗೂ ನೋಡಿಯೂ ಇಲ್ಲ.

ವಿಕ್ರಮಾ ಎನ್ನುವುದು ಸಾಧಾರಣ ನಡಿಗೆ (ಗತಿ ಚಲಿಸುವಿಕೆ) ನಾಲ್ಕು ಕಾಲಿನ ನಡಿಗೆಯನ್ನು ಪುಲಕಾ ಎಂದೂ, ಮುಖ ಹಾಗೂ ಪಾದ ಒಂದೇ ಸಮನಾಗಿದ್ದರೆ (ನೆಟ್ಟಗೆ ನಡೆದರೆ) ಪೂರ್ಣಕಂಠೀ ಎಂದೂ, ತನ್ನ ಇಚ್ಛೆ ಬಂದಂತೆ ಚಲಿಸಿದರೆ ತ್ವರಿತಾ ಎಂದೂ, ಹೊಡೆದರೆ ಮಾತ್ರ ಚಲಿಸುವ ಕುದುರೆಯನ್ನು ನಿರಾಲಂಬಾ ಎಂಬ ಐದನೆಯ ಗತಿಯುಳ್ಳ ಕುದುರೆ ಮತ್ತು ಆರನೆಯ ಗತಿಯುಳ್ಳ ಕುದುರೆಗಳು ಸ್ವರ್ಗ ಲೋಕದಲ್ಲಿ ಪ್ರಸಿದ್ಧವಾಗಿವೆ.

ಋಷಿಗಳಿಂದ ಹೇಳಿದಂತಹ ಕುದುರೆಯ ಕಡಿವಾಣದ ಬಗ್ಗೆ ಹೇಳುತ್ತೇನೆ.

1. ಪುಷ್ಪವಂತೀ
2. ಗೋಕರ್ಣೀ
3. ತೂಲಾ
4. ಉತೂಲಾ
5. ಚಲಾ
6. ತೃಷಾ
7. ನಾಮಖಂಡೀ
8. ಪುಷ್ಪಧಾರಾ
9. ದೃಢಮುಷ್ಟೀ
10. ಚತುಃಸ್ತನೀ
11. ದ್ವಿಹಸ್ತಾ
12. ಏಕಹಸ್ತಾ

ಈ ರೀತಿ ಸುಂದರವಾದ 12 ರೀತಿಯ ಕುದುರೆಯ ಲಗಾಮನ್ನು ಋಷಿಗಳು ತಿಳಿಸಿದ್ದಾರೆ.

## 18. ಆರೋಹವಿಧಾನಾಧ್ಯಾಯ

ಕುದುರೆಯ ಮೇಲೆ ಕುಳಿತ ನಂತರ ಅವುಗಳ ಕಿವಿಯ ಮಧ್ಯ ಭಾಗವನ್ನು ಹಾಗೂ ಅವುಗಳ ಸ್ಥಿತಿಯನ್ನು ಗಮನಿಸಬೇಕು. ಮೊದಲು ನಿಧಾವಾಗಿ ಸವಾರಿ ಮಾಡಬೇಕು. ಮಕ್ಕಳಿಗೆ ಆದೇಶಿಸುವಂತೆ ಸವಾರನು ಕುದುರೆಯನ್ನು ನಿರ್ದೇಶಿಸಬೇಕು.

ಸೊಟ್ಟ ಅಥವಾ ಡೊಂಕಾದ ಶರೀರವುಳ್ಳವನು, ತುಂಬಾ ಎತ್ತರವಾಗಿ-ರುವವನು, ತುಂಬಾ ಕುಳ್ಳಗಿರುವವನು, ಕೆಳಮುಖವಾಗಿ ನೋಡುವವನು, ಭಯದಿಂದ ಜಡವಾದ ಶರೀರ ಹೊಂದಿದವನು, ಈ ರೀತಿಯಾಗಿ ಯಾರು ಇರುವುದಿಲ್ಲವೋ ಅಂತಹವನು ಕುದುರೆಯ ಸವಾರನಾಗಬಹುದು.

ಶಕ್ತಿಯುತವಾದ ತೊಡೆಗಳು, ದೃಢವಾದ ಪಾದಗಳು, ಗಟ್ಟಿಯಾದ ಪೃಷ್ಠಭಾಗವುಳ್ಳವನಾಗಿ ನೇರವಾಗಿ ಸ್ಥಿರವಾಗಿ ಕುಳಿತುಕೊಳ್ಳುವವನು, ಯಾವಾಗಲೂ ಕುದುರೆಯ ಬಲಭಾಗದಿಂದ ಏರಿ ಸ್ಥಿರವಾಗಿ ಕುಳಿತುಕೊಳ್ಳುವವನನ್ನು ನಿಜವಾದ ಕುದುರೆಯ ಸವಾರ ಎಂದು ಹೇಳಿ, ಉಳಿದವರು ಕುದುರೆಗೆ ಭಾರವನ್ನು ಕೊಡುವವರು ಎಂದು ತಿಳಿಸಲಾಗಿದೆ.

ಗ್ರೀಷ್ಮಋತು, ವರ್ಷಋತು, ಶರದೃತುವಿನಲ್ಲಿ ಕುದುರೆಯನ್ನು ಓಡಿಸಬಾರದು ಹಾಗೂ ಹೇಮಂತ, ಶಿಶಿರ, ವಸಂತಋತುವಿನಲ್ಲಿ ಸವಾರಿ ಮಾಡಬೇಕೆಂದು ಹೇಳಲಾಗಿದೆ. ಅಶ್ವಶಾಸ್ತ್ರವನ್ನು ಬಲ್ಲವನೂ ಒಳ್ಳೆಯ ಕುದುರೆ ಸವಾರನೂ ಹೇಮಂತ ಋತುವಿನಲ್ಲಿ, ಶುಕ್ಲಪಕ್ಷದ ಪಾಡ್ಯ ತ್ರಯೋದಶಿಯ ದಿನ ಹಾಗೂ ನವಮಿಯ ದಿನದಂದು, ಧೃತಿ ಸಿದ್ಧಿ ಮೊದಲಾದ ಯೋಗಗಳಿರುವಾಗ, ಭಾನುವಾರ ಸೋಮವಾರದಂದು, ಮೂಲ, ರೋಹಿಣಿ, ಹಸ್ತ, ಪುಷ್ಯ ಮತ್ತು ಉತ್ತರಾ ನಕ್ಷತ್ರಗಳಿರುವಾಗ – ಈ ರೀತಿಯಾದ ದಿನಗಳಲ್ಲಿ ಸಾರಥಿಯು ಕುದುರೆಯ ಸವಾರಿಯನ್ನು ಮಾಡುವುದು ಮಂಗಳಕರ.

**ವಾಹನವಿಧಿ –**

ಕುದುರೆಯು ನಿಲ್ಲಿಸುವ ಜಾಗದಲ್ಲಿ ಬೆಳಗಿನ ಜಾವದಲ್ಲೇ ಶುಚಿಗೊಳಿಸಿ ರೈವತನನ್ನು ಸ್ಥಾಪಿಸಿ ಕೆಂಪು ಬಟ್ಟೆಯನ್ನು ಉಟ್ಟು ಹಾಗೆಯೇ ಕೆಂಪು ಹೂಗಳನ್ನು

ಧರಿಸಿಕೊಂಡು, ಹೂವು, ದೀಪ, ಗಂಧ ಮತ್ತು ಪಾಯಸ, ಪಕ್ವಾನ್ನ, ಪಂಚಗವ್ಯಗಳಿಂದ ರೈವತನನ್ನು ಪೂಜಿಸಬೇಕು.

"ಕುದುರೆಯ ಹೃದಯವೇ ಆಗಿರುವ ರೈವತನಿಗೆ ನಮಸ್ಕಾರ. ಬಿಳುಪಾದ ಸೌಮ್ಯವಾದ ರೂಪವುಳ್ಳ ರೈವತನಿಗೆ ಹ್ರೀಂ ಕ್ರೀಂ ಓಂ ನಮಃ. ಎಲೈ ರೈವತಕನೇ ಈ ಕುದುರೆಯನ್ನು ಓಡಿಸಲು ಸಿದ್ಧಿಗೊಳಿಸು. ಇದನ್ನು ಬಂಧಿಸಿ ನಿನ್ನ ವಶವನ್ನಾಗಿ ಮಾಡಿಕೋ. ಮಹಾಶಕ್ತಿಶಾಲಿಯಾದ ರೈವತಕನೇ ನಿನಗೆ ನಮಸ್ಕಾರ" ಈ ಮಂತ್ರವನ್ನು ಕುದುರೆಯ ಬಲಗಿವಿಯಲ್ಲಿ 21 ಬಾರಿ ಹೇಳಿದ ನಂತರ ಕುದುರೆಯನ್ನು ಓಡಿಸಬೇಕು.

ಕುದುರೆಯನ್ನು ಏರಿ ಒಂದು ಹರಿದಾರಿಯ ದೂರದವರೆವಿಗೆ ಮೆಲ್ಲಮೆಲ್ಲಗೆ ಓಡಿಸಬೇಕು, ಅದರ ಎಡಬಲಗಳಲ್ಲಿ ಕಡಿವಾಣವನ್ನು ಹಿಡಿಯುತ್ತಾ ವೇಗವಾಗಿ ದೂರದವರೆವಿಗೆ ಓಡಿಸಬೇಕು. ವಿಕ್ರಮ ಪುಲಕ ಪೂರ್ಣಕಂಠೀ ಮತ್ತು ತ್ವರಿತಾ ಗತಿಯುಳ್ಳ ಕುದುರೆಗಳನ್ನು ಸಾರಥಿಯು ಲಗಾಮಿನ ಶಬ್ದದಿಂದ ಕುದುರೆಗಳನ್ನು ಓಡಿಸಬೇಕು. ಅತಿದಪ್ಪವೂ ಅಲ್ಲದ, ತುಂಬಾ ಸಣ್ಣವೂ ಅಲ್ಲದ, ಜಡವೂ ಅಲ್ಲದ, ಅತಿಕಠಿಣವೂ ಅಲ್ಲದ ಕಡಿವಾಣವನ್ನು ಬಲ್ಲವನು ಏಳು ಅಂಗುಲ ಪ್ರಮಾಣದಲ್ಲಿ ಸಿದ್ಧಮಾಡಬೇಕು.

ನೂರು ಹಸ್ತಕ್ಕಿಂತ ಅಧಿಕವಾದ ಏಳು ಹಸ್ತಕ್ಕಿಂತ ಕಡಿಮೆಯಲ್ಲದ ಭೂಮಿಯಲ್ಲಿ ಕುದುರೆಯ ಸವಾರನು ಹಿಂದೆ ಮುಂದೆ ಕುದುರೆಯನ್ನು ಓಡಿಸಬೇಕು. ವೃತ್ತಾಕಾರದ ಭೂಮಿಯಲ್ಲಿ ಹಾಗೂ ಚೌಕಾಕಾರದ ಭೂಮಿಯಲ್ಲಿ ಓಡಿಸುವುದು, ಹಸುವು ಎಷ್ಟು ಪ್ರಮಾಣದ ಭೂಮಿಯಲ್ಲಿ ಮೂತ್ರವನ್ನು ಸುರಿಸುತ್ತದೋ ಅಷ್ಟು ಪ್ರಮಾಣದ ಭೂಮಿಯಲ್ಲಿ ಓಡಿಸುವುದು, ಅರ್ಧ ಚಂದ್ರಾಕಾರದ ರೀತಿಯಲ್ಲಿ ತಿರುಗಿಸಿ ಸುತ್ತಿಸುತ್ತಾ ಓಡಿಸಬೇಕು. ಹೀಗೆ ಬೇರೆ

ಬೇರೆ ಪ್ರಪಂಚಗಳಲ್ಲಿ ಕಟಪ್ರದೇಶದಲ್ಲಿ ಪ್ರಚೋದನೆ ಮಾಡಿ ಮೂರು ವಿಧವಾದ ಗತಿಗಳಿಂದ ಯಾವ ಸವಾರನು ಕುದುರೆಯನ್ನು ಓಡಿಸುತ್ತಾನೋ ಅವನಿಗೆ ಕಷ್ಟ ಉಂಟಾಗುವುದಿಲ್ಲ.

ಹೆದರದೆ ಇರುವ ಕುದುರೆಗೆ ಹೆದರಿಸುವುದು, ಹೆದರಿರುವ ಕುದುರೆಯ ಭಯವನ್ನು ಹೋಗಲಾಡಿಸುವುದು – ಈ ಎರಡು ವಿಷಯವನ್ನು ಕುದುರೆಯ ಸವಾರಿ ಮಾಡಬೇಕಾದಾಗ ತಿಳಿದುಕೊಳ್ಳಬೇಕಾದ ರಹಸ್ಯಗಳು. (ಇಲ್ಲಿ ತ್ರಿಘೋದಿತಮ್ ಎಂದು ಮೂಲ ಪಾಠವಿದೆ. ಇಲ್ಲಿ ಎರಡೇ ರಹಸ್ಯವನ್ನು ಹೇಳಿರುವುದರಿಂದ ದ್ವಿಘೋದಿತಮ್ ಎಂದು ಪಾಠವಿರಬಹುದು.)

ಹಿಂದೆ ಹೇಳಿದಂತಹ ದೇಹದ ಅವಯವಗಳಲ್ಲಿ ಎಷ್ಟೇ ದೋಷವಿದ್ದರೂ ಅವುಗಳನ್ನು ದಂಡಿಸಬೇಕು (ಹೊಡೆಯಬೇಕು). ತಿಳಿಯದೆ ಇರುವಾಗ ನೂರು ದೋಷಗಳಿದ್ದರು ಸವಾರನು ಅವುಗಳನ್ನು ದಂಡಿಸಬಾರದು. ಹತೋಟಿಯಲ್ಲಿರುವ ಕುದುರೆಯ ಸವಾರಿಯಲ್ಲಿ ಏನಾದರೂ ದೋಷ ಉಂಟಾದರೆ ಅದು ಸವಾರನ ದೋಷ, ಆ ತಪ್ಪನ್ನು ಸವಾರನು ನಿರಾಕರಿಸಲು ಆಗದು. ಹೀಗೆ ಶಾಸ್ತ್ರದಲ್ಲಿ ಹೇಳಿರುವ ರೀತಿಯಿಂದ ಕುದುರೆಯ ಸವಾರನು ಕುದುರೆಯನ್ನು ಓಡಿಸಿದರೆ, ಅಂತಹವನಿಗೆ ಎಲ್ಲಾ ಕುದುರೆಗಳು ಅವನು ಹೇಳಿದ ರೀತಿಯಲ್ಲಿ ಕೇಳುವಂತೆ ಪಳಗಿಹೋಗುತ್ತವೆ ಮತ್ತು ಸವಾರನಿಗೆ ಒಳ್ಳೆಯ ಫಲವನ್ನು ನೀಡುತ್ತವೆ. ದುಷ್ಟವಲ್ಲದ ಕುದುರೆಯನ್ನು ಧೂಪ, ಲೇಪನ, ಮಂತ್ರಗಳಿಂದ ಹೇಗೆ ಸೇವಿಸಬೇಕು ಎನ್ನುವುದನ್ನು ಋಷಿಗಳು ಹೇಳಿರುವಂತೆ ನಾನು ನಿಮಗೆ ತಿಳಿಸುವೆನು.

ದುಷ್ಟ ಕುದುರೆಗಳನ್ನು ತೋಳಗಳ ಮೂಳೆಗಳು, ಹಲ್ಲುಗಳು, ವಿಷಗಳು ಹಾಗೂ ಮೊಸಳೆಯ ಕೊರೆದಾಡೆಗಳು ಇವುಗಳನ್ನು ಒಟ್ಟಿಗೆ ಸೇರಿಸಿ, ಅದಕ್ಕೆ ತುಪ್ಪ, ಏಲಕ್ಕಿ, ಅಗರು, ಮದ, ಉಶೀರ, ನಾಗಕೇಸರ, ಶ್ರೀಚಂದನ, ಸ್ವರ್ಜಿತತೈಲ

ಇವುಗಳನ್ನು ಸೇರಿಸಿ ಇವುಗಳ ಧೂಪದಿಂದ ಹೊಗೆಯನ್ನು ಕೊಡಬೇಕು. ಕುದುರೆಯ ದೇಹದಲ್ಲಿನ ಎಲ್ಲಾ ದೋಷಗಳನ್ನು ದೂರಮಾಡುವುದಕ್ಕಾಗಿ ವಿಷ ಲೋಹ, ಕಸ್ತೂರಿಪರಿಮಳ, ಏಲಕ್ಕಿ, ಎಣ್ಣೆ, ತುಪ್ಪ, ಮೊಸರು, ಶ್ರೀಗಂಧ ಇವುಗಳನ್ನು ಮಿಶ್ರಣ ಮಾಡಿದ ಧೂಪದಿಂದ ಹೊಗೆಯನ್ನು ಕೊಡಬೇಕೆಂದು ಹೇಳಿದೆ. ದುಷ್ಟ ಕುದುರೆಗಳಿಗೆ ಹಗಲು, ರಾತ್ರಿಯ ಹೊತ್ತು ಅದರ ಎಲ್ಲಾ (ಸಂಧಿಗಳಿಗೆ) ಗಂಟುಗಳಿಗೆ ತೊಪ್ಪೆಯನ್ನು ಲೇಪನ ಮಾಡುವುದರಿಂದ ಅದರ ದೋಷ ನಿವಾರಣೆಯಾಗುತ್ತದೆ. ವಿಶೇಷವಾಗಿ ಅಷ್ಟಮಿ ದಿವಸದಂದು ಮೇಲೆ ಹೇಳಿದ ಹೊಗೆಯನ್ನು ಕೊಡುವುದರಿಂದ ಆ ಕುದುರೆಗಳು ಹತೋಟಿಗೆ ಬರುತ್ತವೆ. ದುಷ್ಟವಾದ ಎಲ್ಲಾ ರೀತಿಯ ಕುದುರೆಗಳಿಗೆ ಶ್ರೀಗಂಧ, ಕೌಂತೀಯೆಂಬ ಮೂಲಿಕೆ, ಸಾಸುವೆ, ಮೆಣಸು ಇವುಗಳನ್ನು ಮಿಶ್ರಣಮಾಡಿ ತಯಾರಿಸಿದ ಅಂಜನವನ್ನು ಎಲ್ಲಾ ಪರ್ವಕಾಲಗಳಲ್ಲಿ (ಹುಣ್ಣಿಮೆ, ಅಮಾವಾಸ್ಯೆ, ಗ್ರಹಣ, ಅರ್ಧೋದಯ, ಮಹೋದಯ ಇತ್ಯಾದಿ ಕಾಲಗಳು) ಅಂಜನವನ್ನು ಹಚ್ಚಬೇಕು ಕೆಲವು ಬಾರಿ ಈ ಅಂಜನವನ್ನು ತೊಂದರೆ ಇರುವ ಜಾಗದಲ್ಲಿ ಹೆಚ್ಚಾಗಿ ಬಳಿದು ಪಟ್ಟಿ ಕಟ್ಟಬೇಕು. ಅಂಜನದಿಂದ ಲೇಪಿತವಾದ ಕುದುರೆಯು ತನ್ನ ಕೋಪ, ಮೋಹ, ಭಯ ಎಲ್ಲವನ್ನು ಬಿಟ್ಟು ಸುಖವನ್ನು ಪಡೆದು ಸವಾರನ ವಶವಾಗಿ ಹೋಗುತ್ತವೆ.

ಬೆಳಗ್ಗೆ ಸವಾರನು ಸ್ನಾನ ಮಾಡಿ ಶುಚಿರ್ಭೂತನಾಗಿ ಬಿಳಿಯ ಬಟ್ಟೆ ತೊಟ್ಟು ಕುದುರೆಯ ಬಳಿ ನಿಂತು, ಜಿತೇಂದ್ರಿಯನಾಗಿ ಅದರ ಬಲ ಕಿವಿಯಲ್ಲಿ ಹೀಗೆ ಜಪಿಸಬೇಕು – ಎಲೈ ಗಂಧರಾಜನಾದ ಕುದುರೆಯೇ, ನೀನು ನನ್ನ ಮಾತನ್ನು ಕೇಳು. ನೀನು ಗಂಧರ್ವರಾಜನ ಕುಲದಲ್ಲಿ ಹುಟ್ಟಿದ್ದೀಯೆ, ನೀನು ಕುಲಘಾತಿಯಾಗಬೇಡ. ಸತ್ಯ ನುಡಿಯುವ ದ್ವಿಜರ, ಸೋಮ, ಗರುಡ, ರುದ್ರ, ವರುಣ, ವಾಯು, ಬಲಿ, ಪ್ರಕಾಶಕನಾದ ಅಗ್ನಿ ಇವರ ಜಾತಿಯನ್ನು ಸ್ಮರಿಸಿಕೋ,

ನೀನು ರಾಜೇಂದ್ರನ ಪುತ್ರ ಎನ್ನುವುದನ್ನು ಮರೆಯಬೇಡ ಸತ್ಯ ವಾಕ್ಯವನ್ನು ನೆನಪಿಸಿಕೊ.

ಎಲೈ ಅಶ್ವವೇ, ದೇವತೆಗಳು ರಾಕ್ಷಸರು ಕ್ಷೀರಸಮುದ್ರವನ್ನು ಮಥನ ಮಾಡಿದಾಗ ನಿನ್ನ ಜೊತೆಯಲ್ಲಿ ಹುಟ್ಟಿದ ಸಮುದ್ರರಾಜನ ಮಗಳಾದ ಲಕ್ಷ್ಮಿಯನ್ನು ಮತ್ತು ಕೌಸ್ತುಭಮಣಿಯನ್ನು ನೆನಪಿಸಿಕೊ.

ನೀನು ದೇವಕುಲದಲ್ಲಿ ಹುಟ್ಟಿದವನಾದ್ದರಿಂದ ನಿನ್ನ ಮಾತನ್ನು ಪರಿಪಾಲಿಸು. ಶ್ರೇಷ್ಠಕುದುರೆಯ ಜಾತಿಯಲ್ಲಿ ಹುಟ್ಟಿದ ನೀನು ನನಗೆ ಗೆಳೆಯನಾಗಿ ವಾಹನವಾಗು. ಮಿತ್ರ! ನನ್ನ ಮಾತು ಕೇಳು, ನೀನು ನನಗೆ ವಾಹನವಾಗಿ ಸಿದ್ಧನಾಗು ನನಗೆ ಯುದ್ಧದಲ್ಲಿ ಜಯವನ್ನು, ಸಂಪತ್ತನ್ನು, ಸಿದ್ಧಿಯನ್ನು ಉಂಟುಮಾಡು. ನಿನ್ನ ಬೆನ್ನ ಮೇಲೇರಿ ಕುಳಿತು ಶತ್ರು ಸೈನ್ಯವನ್ನು ನಾನು ಗೆಲ್ಲುವೆನು. ಹೀಗೆ ಮಂತ್ರವನ್ನು ಜಪಿಸಿ, ಈ ಮಂತ್ರದಿಂದ ಉಲ್ಲಾಸಿತನಾಗಿ, ಎಲ್ಲಾ ದೇವತೆಗಳನ್ನು ವಿಸರ್ಜಿಸಿ ಕುದುರೆಯನ್ನು ಸವಾರಿ ಮಾಡಬೇಕು. ವಾಹನಗಳಲ್ಲಿ ಯಾವ ಜನರು ಕುದುರೆಯನ್ನು ವಾಹನಗಳನ್ನಾಗಿ ಮಾಡಿಕೊಳ್ಳುತ್ತಾರೋ ಅವರು ಗೆಳೆಯರಾಗುತ್ತಾರೆ. ಉಳಿದ ವಾಹನಗಳ ಮಧ್ಯೆ ಇತರ ಕುದುರೆಗಳೂ ಸಹ ಮಿತ್ರರಾಗಿ ವಾಹನ ಯೋಗ್ಯವಾಗುತ್ತವೆ.

## 19. ಅಂಗಮಾನವಿಜ್ಞಾನ

ಕುದುರೆಯ ದೇಹದ ಪ್ರಮಾಣವನ್ನು ಅಂಗುಲಗಳಲ್ಲಿ ಮೊದಲೇ ಹೇಳಲ್ಪಟ್ಟಿದೆ. ಅದನ್ನು ಈಗ ಪ್ರತಿಪಾದಿಸುತ್ತೇನೆ.

ಕಟಬಾಯಿ, ಮೇಲ್ಭಾಗದ ತುಟಿ, ಹುಬ್ಬು, ಕಂಕಳು, ಬಾಲದ ಕೆಳಗಿನ ಜಾಗ ಇವುಗಳು ನಾಲ್ಕು ಅಂಗುಲವಿರುತ್ತವೆ. ಕುದುರೆಯ ಹೆಗಲಿನ ಭಾಗ,

ಮೂಗಿನ ತುದಿ, ಮೂಗಿನ ಹೊಳ್ಳೆಗಳು, ಹೊಕ್ಕಳು, ಕಣ್ಣುಗಳು ಇವುಗಳಲ್ಲಿ ಒಂದೊಂದು ಸಹ ಮೂರು ಅಂಗುಲ ಪ್ರಮಾಣದಲ್ಲಿರುತ್ತವೆ ಎಂದು ಅಶ್ವಶಾಸ್ತ್ರಬಲ್ಲವರು ಹೇಳಿದ್ದಾರೆ.

ಮೇಲ್ತುಟಿ, ಶಂಖ (ಕಪೋಲದ ಮೂಳೆ,) ಗಲ್ಲ, ಸೊಂಟ ಇವುಗಳು ಎರಡು ಅಂಗುಲ ಇರುತ್ತವೆಂದು ಹೇಳಲಾಗಿದೆ. ತಲೆ, ಭುಜಗಳ ಮಧ್ಯಭಾಗ, ಕಿವಿಗಳು ಇವು ಆರು ಅಂಗುಲವೆಂದು ತಿಳಿಸಲಾಗಿದೆ. ಮೂಗಿನ ದಂಡ, ಕೆನ್ನೆ, ದವಡೆ ಇವುಗಳು 16 ಅಂಗುಲವಿರುತ್ತವೆ. ಕುದುರೆಯ ದೇಹದ ಅಕ್ಕಪಕ್ಕದ ಭಾಗಗಳು 30 ಅಂಗುಲಗಳು ಹಾಗೂ ಹಣೆ 12 ಅಂಗುಲ. ಮೊಣಕಾಲು 20 ಅಂಗುಲ, ಹೃದಯ 3 ಅಂಗುಲ, ಹೃದಯದ ವ್ಯಾಸ 12 ಅಂಗುಲ, ಗಂಟಲು ಒಂದು ಅಂಗುಲ. ಮೇಲೆ ಹೇಳಿದ ಪ್ರಮಾಣದ ಅಳತೆಯ ಕುದುರೆಗಳು ಉತ್ತಮವಾದವುಗಳು. ಈ ಅಳತೆಗೆ ¼ ಭಾಗ ಕಡಿಮೆ ಇದ್ದರೆ ಅವು ಮಧ್ಯಮ ಕುದುರೆಗಳು ಹಾಗೂ ½ ಭಾಗ ಕಡಿಮೆ ಇದ್ದರೆ ಸಾಮಾನ್ಯ ಕುದುರೆಗಳೆಂದು ಹೇಳಲ್ಪಟ್ಟಿದೆ. ಇದನ್ನು ನಿಃಸಂಶಯವಾಗಿ ಹೇಳಲಾಗಿದೆ.

## 20. ಮನಸ್ತತ್ತ್ವವಿಜ್ಞಾನ

ಕುದುರೆಯು ಯಾವ ಸಂದರ್ಭದಲ್ಲಿ ಹೇಗೆ ವರ್ತಿಸುತ್ತದೆ ಎಂದು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

**ಹೆದರಿಕೆ –**

ಕುದುರೆಗಳಿಗೆ ಎರಡು ಪ್ರಕಾರಗಳಲ್ಲಿ ಹೆದರಿಕೆ ಉಂಟಾಗುತ್ತವೆ. ಒಂದು ಕುದುರೆಯ ದೇಹದ ಮೇಲೆ ಹಾಕುವ ಜೀನು ಕಡಿವಾಣ ಇತ್ಯಾದಿ ಲೋಹ–ಪದಾರ್ಥಗಳಿಂದ. ಮತ್ತೊಂದು ಅವುಗಳಿಗೆ ಹೊಡೆಯುವುದರಿಂದ ಹೆದರುತ್ತವೆ.

**ಹಾಸ್ಯ –**

ಕುದುರೆಯ ಹಾಸ್ಯತನವನ್ನು ಒಂದೆಡೆ ಹೀಗೆ ವಿವರಿಸಿದ್ದಾರೆ – ಕತ್ತರಿಸಲ್ಪಟ್ಟ ಕಾಲು ಕೈಗಳುಳ್ಳ ಸೈನಿಕರನ್ನು ನೋಡಿ ಕುದುರೆಯು ನಗುತ್ತದೆ.

**ಚಂಚಲ –**

ಕುದುರೆಯ ನಾಲಿಗೆ, ಕಿವಿ, ಕಣ್ಣುಗಳು, ಕಾಲುಗಳು ಹಾಗೂ ಬಾಲ ಇವುಗಳು ಪ್ರಶಸ್ತವಾಗಿದ್ದು ಚಂಚಲವಾಗಿದ್ದರೆ ಈ ರೀತಿಯ ಸುಂದರವಾದ ಅವಯವವುಳ್ಳ ಕುದುರೆಗಳು ರಾಜನಿಗೆ ಯುದ್ಧದಲ್ಲಿ ಜಯವನ್ನು ಹಾಗೂ ಸುಖವನ್ನು ಉಂಟುಮಾಡುತ್ತವೆ.

**ಹರ್ಷ –**

ರಾಜನ ಪಟ್ಟಾಭಿಷೇಕದ ಸಮಯದಲ್ಲಿ, ಕಡಲೆಯನ್ನು ತಿನ್ನುವಾಗ, ಚಿನ್ನದ ಹಾರಗಳನ್ನು ಹಾಕಿದಾಗ, ಕಿರುಗಂಟೆಗಳ ಶಬ್ದವನ್ನು ಕೇಳಿದಾಗ, ಸ್ವಾಮಿಯು ಉಪಚಾರ ಮಾಡಿದಾಗ, ಅದರ ಗುಣಗಳನ್ನು ಹೊಗಳಿದಾಗ, ಈ ಆರು ಸಂದರ್ಭಗಳಲ್ಲಿ ಕುದುರೆಗಳು ಸಂತೋಷಗೊಳ್ಳುತ್ತವೆ.

**ಧೈರ್ಯ –**

ಕಬ್ಬಿಣದಿಂದ ಬಂಧಿಸಿದಾಗ, ಗಾಯಗೊಂಡಾಗ, ರೋಗಬಂದಾಗ, ಯುದ್ಧದಲ್ಲಿರುವಾಗ, ಆನೆಗಳ ಮಧ್ಯದಲ್ಲಿರುವಾಗ, ಸೈನಿಕರ ಮಧ್ಯದಲ್ಲಿರುವಾಗ, ನೀರಿನಿಂದ ಹಾಗೂ ಬೆಂಕಿಯಿಂದ ಸುತ್ತುವರಿಯಲ್ಪಟ್ಟಾಗ, ಭಯಂಕರವಾದ ಪರಿಸ್ಥಿತಿಗಳಲ್ಲಿ ಈ 9 ಸನ್ನಿವೇಶದಲ್ಲಿ ಕುದುರೆಗಳು ಧೈರ್ಯದಿಂದಿರುತ್ತವೆ.

**ಕೋಪ –**

ಕುದುರೆಗಳ ಪ್ರಶಿಕ್ಷಣದ ಕಾಲದಲ್ಲಿ ಸವಾರನು ಚಾಟಿಯಿಂದ ಹೊಡೆದರೆ ಹಾಗೂ ಅವುಗಳು ತಿನ್ನುವಾಗ ಕಲ್ಲು ಸಿಕ್ಕಿದರೆ ಕುದುರೆಗಳು ಕೋಪಗೊಳ್ಳುತ್ತವೆ.

**ದುಃಖ –**

ಕಾರಣವಿಲ್ಲದೆ ಚಾಟಿಯಿಂದ ಹೊಡೆದರೆ, ನಡೆಯುತ್ತಿರುವಾಗ ಹೊಡೆದರೆ, ಸರಿಯಾದ ಗತಿಯಲ್ಲಿ ಹೋಗದಿದ್ದಾಗ ಹಾಗೂ ಆಜ್ಞೆಯನ್ನು ಪಾಲಿಸದಿದ್ದಾಗ ಅದರ ಬೆನ್ನ ಮೇಲೆ ಹೊಡೆದರೆ, ಅಯೋಗ್ಯನ ಕೈಯಲ್ಲಿ ಕೊಟ್ಟಾಗ, ಯುದ್ಧ ಕಾಲದಲ್ಲಿ, ಪ್ರವಾಸದಲ್ಲಿ, ವಯಸ್ಸಾದ ಸಮಯದಲ್ಲಿ ಹೀಗೆ ಈ ಏಳು ಸಂದರ್ಭ-ಗಳಲ್ಲಿ ಕುದುರೆಗಳು ದುಃಖಿಸುತ್ತವೆ.

**ಕೆನೆಯುವಿಕೆ –**

ಗರ್ಭಧರಿಸಿದಾಗ, ಋತುಕಾಲದಲ್ಲಿ, ಯುದ್ಧಕಾಲದಲ್ಲಿ, ಜಯಗಳಿಸಿದಾಗ, ಯಾಗ ಮಾಡುವಾಗ, ತಿನ್ನುವಾಗ, ಒಳ್ಳೆಯ ಗುಣವಂತ ಸವಾರನು ಕುದುರೆಯನ್ನು ಏರಿದಾಗ, ತನ್ನವರನ್ನು ಪರಿತ್ಯಾಗ ಮಾಡಿದಾಗ, ಅಪೂರ್ವವಾದ ಕುದುರೆಯನ್ನು ನೋಡಿದಾಗ – ಪ್ರಕರಣಗಳಲ್ಲಿ ಕುದುರೆಗಳು ಕೆನೆಯುತ್ತವೆ ಎಂದು ಕುದುರೆಯ ಲಕ್ಷಣವನ್ನು ತಿಳಿದಂತಹ ಪಂಡಿತರು ಹೇಳಿದ್ದಾರೆ.

**ಉತ್ಸಾಹ –**

ತಿನ್ನುವಾಗ, ಭೋಜನ ಮಾಡುವಾಗ ಹಾಗೂ ಹುಲ್ಲು ಮತ್ತು ಮಾಂಸವನ್ನು ತಿನ್ನುವಾಗ, ಬೆಲ್ಲದ ನೀರನ್ನು ಕುಡಿಯುವಾಗ, ಮಾಲೀಶು ಮಾಡುವಾಗ, ಈ ಸಂದರ್ಭಗಳಲ್ಲಿ ಕುದುರೆಗಳು ಖುಷಿಯಾಗಿರುತ್ತವೆ.

**ನಾಚಿಕೆ –**

ತನ್ನ ವೇಗಕ್ಕೆ ಸಮನಾಗಿ ಇನ್ನೊಂದು ಕುದುರೆ ಹಿಂಬಾಲಿಸದಿದ್ದಾಗ ನೆರಳಿನ ಕುದುರೆಯಂತೆ ನಾಚಿಕೆಗೊಳ್ಳುತ್ತವೆ. ವೀರಕುದುರೆಯು ಗೊರಸಿನಿಂದ ಧೂಳನ್ನು ಎಬ್ಬಿಸಿ, ಆ ಧೂಳಿನಿಂದ ಸೂರ್ಯನನ್ನು ಕಾಣದಂತೆ ಮಾಡುತ್ತವೆ.

ಕುದುರೆಯು ಕೆನೆಯುತ್ತಾ ಪುರೀಷವನ್ನು ವಿಸರ್ಜಿಸಿದರೆ, ಬಾಲವನ್ನು ಆಡಿಸುತ್ತಾ ಭೂಮಿಯನ್ನು ಗೊರಸಿನಿಂದ ಅಪ್ಪಳಿಸುತ್ತಿದ್ದರೆ, ಸೂರ್ಯನನ್ನು ನೋಡುತ್ತಿದ್ದರೆ, ಹೊಸಬರನ್ನು ನೋಡುತ್ತಿದ್ದರೆ, ಕಾಲಿನ ಉಗುರಿನಿಂದ ಪೃಷ್ಠಭಾಗವನ್ನು ಸ್ಪರ್ಶಿಸಿದರೆ, ಅದು ಒಳ್ಳೆಯ ಲಾಭವನ್ನು ತರುವ ಕುದುರೆ.

************************



1. ಅಶ್ವಶಾಸ್ತ್ರಜ್ಞನಾದ ಶಾಲಿಹೋತ್ರಮುನಿಯು ಶಿಷ್ಯರೊಡನೆ



2. ಪುರಾಣದಲ್ಲಿ ಉಲ್ಲೇಖಿಸಿರುವ ರೆಕ್ಕೆಯಿರುವ ಕುದುರೆಗಳು



3. ಧ್ರುವಾವರ್ತಗಳು (ಅಧ್ಯಾಯ 7, ಶ್ಲೋಕ 8–9)



4. ವಿವಿಧ ಬಗೆಯ ಆವರ್ತಗಳು (ಅಧ್ಯಾಯ 7, ಶ್ಲೋಕ 6)




5. ನಿಃಶ್ರೇಣಿಕಾ ಹಾಗೂ ಚತುರಂಕ (ಅಧ್ಯಾಯ 7, ಶ್ಲೋಕ 14)





6. ಹಣೆಯ ಮೇಲಿರುವ ಶುಭಾವರ್ತಗಳು
(ಅಧ್ಯಾಯ 7, ಶ್ಲೋಕ 23–24)



ಕರ್ಣಮೂಲದಲ್ಲಿರುವ ವೃಷಭಾವರ್ತ
(ಅಧ್ಯಾಯ 7, ಶ್ಲೋಕ 28)



7. ಹಣೆಯ ಮೇಲಿರುವ ವಿವಿಧ ಬಗೆಯ ಪುಂಡ್ರಗಳು (ಅಧ್ಯಾಯ 9, ಶ್ಲೋಕ 2)



8. ದೇವಮಣಿ (ಅಧ್ಯಾಯ 7, ಶ್ಲೋಕ 29)



9. ಗಂಟಲಿನಲ್ಲಿರುವ ಆವರ್ತ
(ಅಧ್ಯಾಯ 7, ಶ್ಲೋಕ 32)



ಕೂದಲ ತುದಿಯಲ್ಲಿರುವ
ಶುಕ್ತ್ಯಾವರ್ತ
(ಅಧ್ಯಾಯ 7, ಶ್ಲೋಕ 34)



10. ಪ್ರಶಸ್ತವಲ್ಲದ ಜಾಗದಲ್ಲಿರುವ ಆವರ್ತ (ಅಶುಭಾವರ್ತ)
(ಅಧ್ಯಾಯ 7, ಶ್ಲೋಕ 42)



**11. ಅಪ್ರಶಸ್ತ್ಯಸ್ಥಳದಲ್ಲಿನ ಆವರ್ತಗಳು (ಅಧ್ಯಾಯ 7, ಶ್ಲೋಕ 43)**





12. ಅಪ್ರಶಸ್ತ ಸ್ಥಳದಲ್ಲಿನ ಆವರ್ತಗಳು (ಅಧ್ಯಾಯ 7, ಶ್ಲೋಕ 45 ಮತ್ತು 58)



13. ಕುದುರೆಯ ಸವಾರ (ಅಧ್ಯಾಯ 16)



15. ಆವರ್ತ, ಶುಕ್ತಿ, ಸಂಘಾತ, ಮುಕುಲ, ಅವಲೀಢ, ಶತಪಾದಿ,
ಪಾದುಕಾರ್ಧ, ಪಾದುಕ (ಎಡದಿಂದ ಬಲಕ್ಕೆ)
(ಅಧ್ಯಾಯ 7, ಶ್ಲೋಕ 61–62)



16. ಕುದುರೆಯ ಮೂಗಿನ ಬಳಿ ಇರುವ ಕೆಟ್ಟ ಗುರುತುಗಳು
(ಅಧ್ಯಾಯ 14, ಶ್ಲೋಕ 10–11)

